ಜ್ಞಾಪಕರೂಪ—೨

ಭಾರವಿ ಚಿತ್ರಿಸಿರುವ

# ಕ್ಷಮಾಮೂರ್ತಿ ಧರ್ಮರಾಜ

ಜಿ. ಪಿ. ರಾಜರತ್ನಂ







ಕರ್ಣಾಟಕ ಸಂಘ

...ಂಟ್ರಲ್ ಕಾಲೇಜ್, ಬೆಂಗಳೂರು

೭೫ ನಯೆ ಪೈಸೆ

ಜ್ಞಾಪಕರೂಪ—

ಭಾರವಿ ಚಿತ್ರಿಸಿರುವ

# ಕ್ಷಮಾಮೂರ್ತಿ ಧರ್ಮರಾಜ

ಜಿ. ಪಿ. ರಾಜರತ್ನಂ



ಸಹಸಾ ವಿದಧೀತ ನ ಕ್ರಿಯಾಮವಿವೇಕಃ ಪರಮಾಪದಾಂ ಪದಮ್ ।
ವೃಣತೇ ಹಿ ವಿಮೃಶ್ಯಕಾರಿಣಂ ಗುಣಲುಬ್ಧಾಃ ಸ್ವಯಮೇವ ಸಂಪದಃ ॥
ಉಪಕಾರಕಮಾಯತೇರ್ಭೃಶಂ ಪ್ರಸವಃ ಕರ್ಮಫಲಸ್ಯ ಭೂರಿಣಃ ।
ಅನಪಾಯಿ ನಿಬರ್ಹಣಂ ದ್ವಿಷಾಂ ನ ತಿತಿಕ್ಷಾಸಮಮಸ್ತಿ ಸಾಧನಮ್ ॥

(ಧರ್ಮರಾಜನ ಮಾತು: ಸರ್ಗ ೨—ಪದ್ಯ ೩೦, ೪೩)




ಕರ್ಣಾಟಕ ಸಂಘ
ಸೆಂಟ್ರಲ್ ಕಾಲೇಜ್, ಬೆಂಗಳೂರು

ಮೊದಲನೆಯ ಮುದ್ರಣ: ೧೭-೩-೫೮



## ಒಂದು ಹೊಸ ಪ್ರಯೋಗ

ಸೆಂಟ್ರಲ್ ಕಾಲೆಜ್ ಕರ್ಣಾಟಕ ಸಂಘವು ಈ ವರ್ಷ ಕೈಕೊಂಡ ಒಂದು ಹೊಸ ಪ್ರಯೋಗದ ಎರಡನೆಯ ಫಲ—ಈ ಪುಸ್ತಕ.

ಈಚಿನ ವಿದ್ಯಾರ್ಥಿಗಳಲ್ಲಿ ಪಠ್ಯಪುಸ್ತಕಗಳನ್ನು ಕೊಳ್ಳುವ, ಕೊಂಡರೂ ಅದನ್ನು ತರಗತಿಗೆ ತರುವ, ತಂದರೂ ಪಾಠ ಹೇಳುವಾಗ ಅದನ್ನು ನೋಡುವ, ನೋಡಿದರೂ ಮಾಡಿದ ಪಾಠವನ್ನು 'ನೋಟ್'ಮಾಡಿಕೊಳ್ಳುವ ರೂಢಿ ಕಡಮೆಯಾಗುತ್ತಿದೆ. ಮೇಲೆ ಹೇಳಿದವರಲ್ಲಿ ಮೊದಲಿನ ಮೂರು ವರ್ಗಕ್ಕೆ ನಾವೇನೂ ಮಾಡುವಂತಿಲ್ಲ. ಆದರೆ, ತರಗತಿಯಲ್ಲಿ ಆದ lectureಅನ್ನು ಹೇಗೆ ಗುರುತು ಹಾಕಿಕೊಳ್ಳಬೇಕು ಎಂಬುದನ್ನು ಅರಿಯದೆ ತೊಳಲುವವರ ಅನುಕೂಲಕ್ಕಾಗಿ ಈ 'ಜ್ಞಾಪಕರೂಪ' ಎಂಬ ಪ್ರಕಟನೆಯನ್ನು ಪ್ರಾರಂಭಿಸಲಾಯಿತು. ತರಗತಿಯಲ್ಲಿ ಒಂದೊಂದು ಪಾಠ ಮುಗಿದ ಕೂಡಲೆ, ಅದಕ್ಕೆ ಸಂಬಂಧಿಸಿದಂತೆ ೧೬ ಪುಟ ಅಚ್ಚುಮಾಡಿಸುವುದು; ಅದಕ್ಕೆ ತಗಲುವ ಕಾಗದದ, ಮುದ್ರಣದ ವೆಚ್ಚವನ್ನು ಇಷ್ಟವುಳ್ಳವರು ತಾವು ವಹಿಸಿಕೊಳ್ಳುವುದು—ಎಂದು ಒಪ್ಪಿಕೊಂಡಂತೆ, ಈ ಪುಸ್ತಕದ ಪ್ರಕಟನೆಗೆ ಸೆಂಟ್ರಲ್ ಕಾಲೆಜ್ ವಿದ್ಯಾರ್ಥಿಗಳಿಂದ ಇದುವರೆಗೆ ಸುಮಾರು ನೂರಿಪ್ಪತ್ತು ರೂಪಾಯಿಗಳು ಸಂದಾಯವಾಗಿದೆ. ಈಯೊಂದು ಸಹಕಾರಕ್ಕಾಗಿ ಸಂಘವು ಅವರನ್ನು ವಂದಿಸುತ್ತದೆ.

ಅವರಿಗೆ ಬಿಡಿಬಿಡಿಯಾಗಿ ಕೊಟ್ಟ ಫಾರಮುಗಳು ಈಗ ಸಣ್ಣ ಪುಸ್ತಕವಾಗಿ ಸಾರ್ವಜನಿಕರ ಮುಂದೆ ಇದೆ. ಇದರ ಮಾರಾಟದಿಂದ ಬರುವ—ಇದು ಮಹಾಭಾರತಕ್ಕೆ ಸಂಬಂಧಪಟ್ಟ ವಿಚಾರವಾದ್ದರಿಂದ 'ಬರಬಹುದಾದ' ಎಂಬ ಪ್ರಶ್ನೆಯೇ ಇಲ್ಲ—ಲಾಭಾಂಶವನ್ನು ಸೆಂಟ್ರಲ್ ಕಾಲೇಜಿನ ಅರ್ಹರಾದ ವಿದ್ಯಾರ್ಥಿಗಳಿಗೆ ದ್ರವ್ಯಸಹಾಯವಾಗಿ ವಿನಿಯೋಗಿಸಲಾಗುವುದು.





# ಮುನ್ನುಡಿ

**'ಪರಂ ಕವೀನಾಂ ಆಧಾರಂ'**

**ಆಶ್ಚರ್ಯಮಿದಮಾಖ್ಯಾನಂ ಮುನಿನಾ ಸಂಪ್ರಕೀರ್ತಿತಂ।**
**ಪರಂ ಕವೀನಾಮಾಧಾರಂ ಸರ್ವಶ್ರುತಿಮನೋಹರಂ॥**

"ಮುನಿಯಿಂದ ಪ್ರಸಿದ್ಧಪಡಿಸಲ್ಪಟ್ಟ ಈ ಆಖ್ಯಾನವು ಆಶ್ಚರ್ಯಕರವಾದದ್ದು, ಕವಿಗಳಿಗೆ ದೊಡ್ಡ ಆಧಾರವಾದದ್ದು, ಕೇಳಿದ ಕಿವಿಗಳಿಗೆಲ್ಲ ಮನೋಹರವಾದದ್ದು" ಎಂಬ ಮಾತು ಶ್ರೀಮದ್ರಾಮಾಯಣಕ್ಕೆ ಮಾತ್ರವಲ್ಲದೆ ಭಾರತ ಭಾಗವತಗಳಿಗೂ ಹೊಂದುತ್ತದೆ. "ಪ್ರಜ್ವಾಲಿತೋ ಜ್ಞಾನಮಯಃ ಪ್ರದೀಪಃ." ದೀಪಂಕರರುಗಳಲ್ಲಿ ರತ್ನತ್ರಯರಾದ ವಾಲ್ಮೀಕಿ, ವ್ಯಾಸ, ಶುಕಮುನಿಗಳ ಪ್ರದೀಪಗಳಿಂದ ತಮ್ಮ ತಮ್ಮ ಹಣತೆಗಳನ್ನು ಹಚ್ಚಿಕೊಂಡು ಲೋಕಕ್ಕೆ ಬೆಳಕು ಕಾಣಿಸಿದ ಕವಿಗಳ ಸಂಖ್ಯೆಗೆ ಮಿತಿಯಿಲ್ಲ. ಅಂತಹ ಕವಿಗಳಲ್ಲಿ, ಕಾಳಿದಾಸನ ಅನಂತರ ಸಂಸ್ಕೃತ ಕಾವ್ಯಗಗನದಲ್ಲಿ ಬೆಳಗುವ ದೊಡ್ಡ ಬೆಳಕು **'ಭಾರವಿ'.** "ಭಾ-ರವಿ" ಎಂದರೆ ಕಾಂತಿಯಿಂದ ಬೆಳಗುವ ಸೂರ್ಯ ಎಂದು ಅರ್ಥ. ಈತನ ಕೃತಿ **'ಕಿರಾತಾರ್ಜುನೀಯ':** ವ್ಯಾಸರ ಮಹಾಭಾರತದ ವನಪರ್ವದಿಂದ ಆಯ್ದುಕೊಂಡ ಒಂದು ಪ್ರಸಂಗ; ಅರ್ಜುನನು ಕಿರಾತ ವೇಷದ ಶಿವನೊಡನೆ ಹೋರಾಡಿ ಪಾಶುಪತಾಸ್ತ್ರವನ್ನು ಪಡೆದದ್ದು ಈ ಕಾವ್ಯದ ವಸ್ತು.

ಕನ್ನಡ ಕವಿ ನೇಮಿಚಂದ್ರನ ಒಂದು ಮಾತು ನೆನಪಾಗುತ್ತದೆ:

**ಕಟ್ಟುಗೆ ಕಟ್ಟದಿರ್ಕೆ ಕಡಲಂ ಕಪಿಸಂತತಿ; ವಾಮನ ಕ್ರಮಂ**
**ಮುಟ್ಟುಗೆ ಮುಟ್ಟದಿರ್ಕೆ ಮುಗಿಲಂ ; ಹರನಂ ನರನೊತ್ತಿ ಗಂಟಲಂ**
**ಮೆಟ್ಟುಗೆ ಮೆಟ್ಟದಿರ್ಕೆ; ಕವಿಗಳ್ ಕೃತಿಬಂಧದೊಳಲ್ತೆ ಕಟ್ಟಿದರ್!**
**ಮುಟ್ಟಿದರ್! ಇಕ್ಕಿ ಮೆಟ್ಟಿದರ್! ಇದೇನಳವಗ್ಗಳವೋ ಕವೀಂದ್ರರಾ!**

"ಕಪಿಗಳು ಸಾಲುಸಾಲಾಗಿ ಬಂದು ಸಮುದ್ರಕ್ಕೆ ಸೇತುವೆ ಕಟ್ಟಲಿ, ಕಟ್ಟದೆ ಇರಲಿ; ವಾಮನನ ಹೆಜ್ಜೆ ಆಕಾಶವನ್ನು ಮುಟ್ಟಲಿ, ಮುಟ್ಟದೆ ಇರಲಿ; ಹರನನ್ನು ನರನು ಸೋಲಿಸಿ ಅವನ ಗಂಟಲನ್ನು ಮೆಟ್ಟಲಿ, ಮೆಟ್ಟದೆ ಇರಲಿ; (ವಾಲ್ಮೀಕಿ, ಶುಕ, ವ್ಯಾಸ ಎಂಬ) ಕವಿಗಳು ತಮ್ಮ ಕೃತಿಗಳ ಬಂಧದಲ್ಲಿ

(ಸೇತುವೆ) ಕಟ್ಟಿದರು! (ಆಕಾಶವನ್ನು) ಮುಟ್ಟಿದರು! (ಹರನನ್ನು) ಒತ್ತಿ (ಅವನ ಗಂಟಲನ್ನು) ಮೆಟ್ಟಿದರು! ಕವೀಂದ್ರರುಗಳ ಸಾಮರ್ಥ್ಯ ಅತ್ಯಂತ ಅತಿಶಯವಾದದ್ದು!"

ಮೇಲಿನ ಪ್ರಶಂಸೆಯನ್ನು ಮಾಡಿದ ಕವಿ, ದೃಷ್ಟಿಯಿಂದ ಜೈನ; ವೈದಿಕರ ರಾಮಾಯಣ, ಭಾರತ, ಭಾಗವತಗಳಲ್ಲಿ ಧರ್ಮಪರವಾದ ನಂಬಿಕೆ ಇಲ್ಲದವನು. ಆದರೆ, ತಾನು ಜೈನಧರ್ಮೀಯನಾದುದಕ್ಕಿಂತ ಅಧಿಕವಾಗಿ ಕವಿಧರ್ಮೀಯನಾದ ಕಾರಣ, ಆ ಋಷಿಕವಿಗಳ ರಸಸೃಷ್ಟಿಗಳನ್ನು ಮೆಚ್ಚಿಕೊಂಡವನು. ಇವನು ಭಾರತದಿಂದ ಎತ್ತಿ ಉದಾಹರಿಸಿದ್ದು 'ಹರನಂ ನರನೊತ್ತಿ ಗಂಟಲಂ ಮೆಟ್ಟಿದ್ದು', 'ಕಿರಾತಾರ್ಜುನೀಯ'ದ ಕಥೆ. ನೇಮಿಚಂದ್ರ ಹೊಗಳಿರುವ ಈ ಪ್ರಕರಣವನ್ನು ಪಂಪಕವಿ ತನ್ನ "ವಿಕ್ರಮಾರ್ಜುನ ವಿಜಯ"ದಲ್ಲಿ ಬಹು ಸಾರವತ್ತಾಗಿ ಚಿತ್ರಿಸಿದ್ದಾನೆ. ಆತನಾದರೂ ತನ್ನ ಚಿತ್ರಣದಲ್ಲಿ ಭಾರವಿಯ ಸಂಸ್ಕೃತ 'ಕಿರಾತಾರ್ಜುನೀಯ'ಕ್ಕೆ ಋಣಿಯಾದವನೇ.

ಕನ್ನಡಕ್ಕೆ ಆದಿಕವಿಯಾದ ಪಂಪನೂ ಗೌರವಿಸಿರುವ ಭಾರವಿಯ 'ಕಿರಾತಾರ್ಜುನೀಯ'ದ ಹದಿನೆಂಟು ಸರ್ಗಗಳನ್ನು ದಿವಂಗತ ಆಸ್ಥಾನ ವಿದ್ವಾನ್ ಶ್ರೀ ಪಂಡಿತ ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರೀ ಅವರು ಕನ್ನಡದಲ್ಲಿ ಗದ್ಯರೂಪವಾಗಿ ಅನುವಾದ ಮಾಡಿದ್ದಾರೆ; ಅದು ಇನ್ನೂ ಅಚ್ಚಾಗಿಲ್ಲ. ಕನ್ನಡದಲ್ಲಿ 'ಕಿರಾತಾರ್ಜುನೀಯ'ದ ಮೊತ್ತಮೊದಲನೆಯ ಪೂರ್ಣಾನುವಾದ ಇದೇ ಇರಬಹುದೇನೊ! ಈಗ, ಮೂರು ವರ್ಷಗಳ ಹಿಂದೆ, ಡಾ|| ಕೆ. ಕೃಷ್ಣಮೂರ್ತಿ ಅವರು 'ಕಿರಾತಾರ್ಜುನೀಯ'ದ ಮೊದಲನೆಯ ಆರು ಸರ್ಗಗಳ ಪದ್ಯಾನುವಾದವನ್ನು ಕೊಟ್ಟಿರುತ್ತಾರೆ. ಸಂಸ್ಕೃತದ ಮೂಲವನ್ನು ಓದಿ ಅರ್ಥಮಾಡಿಕೊಳ್ಳಲಾರದವರಿಗೆ ಈ ಕನ್ನಡ ಅನುವಾದ ಒಂದು ದೊಡ್ಡ ಅನುಕೂಲದ ಉಪಕಾರವಾಗಿರುವುದಾದರೂ, ಅದು ಭಾರವಿಯ ಕೃತಿಯಾದ ಕಾರಣದಿಂದ, ಸಂಸ್ಕೃತ ಮೂಲದ ಕಷ್ಟ ಸಂಸ್ಕೃತಕ್ಕಿದ್ದರೆ, ಕನ್ನಡ ಅನುವಾದದ ಕಷ್ಟ ಕನ್ನಡಕ್ಕಿದ್ದೇ ಇದೆ. ಆದ್ದರಿಂದ, ಕನ್ನಡ ಅನುವಾದವನ್ನು ಸ್ವತಂತ್ರವಾಗಿ ಓದಿಕೊಳ್ಳಲಾರದವರಿಗೆ ಒಂದು ಸಣ್ಣ ಕರಾವಲಂಬನವಾಗಿ ಈ 'ಜ್ಞಾಪಕ ರೂಪ'ವನ್ನು ಸಿದ್ಧಪಡಿಸಿರುವುದಾಗಿದೆ. ಅನುವಾದದ ಮೂಲಕವಾಗಿ ವಾಚಕರು ಮೂಲಕೃತಿಗೆ ತಿರುಗಬೇಕೆಂದು ಹೇಗೆ ಅಪೇಕ್ಷಿಸುವೆವೋ ಹಾಗೆಯೇ ಈ 'ಜ್ಞಾಪಕ ರೂಪ'ದಿಂದ ವಾಚಕರು 'ಕನ್ನಡ

ಕಿರಾತಾರ್ಜುನೀಯ'ದ ಛಂದೋರೂಪವನ್ನು ಓದಬೇಕೆಂದೂ ನಮ್ಮ ಅಪೇಕ್ಷೆ.

ಈ 'ಜ್ಞಾಪಕ ರೂಪ'ವನ್ನು ಸಿದ್ಧಗೊಳಿಸುವ ಸಂದರ್ಭದಲ್ಲಿ—

1. ಕನ್ನಡ ಕಿರಾತಾರ್ಜುನೀಯ—ಡಾ॥ ಕೆ. ಕೃಷ್ಣಮೂರ್ತಿ
2. Kirātārjunîyam (I-III)—M. R. Kale
3. Kirātārjunîya (I-X)—L. R. Pangarker
4. ಶ್ರೀ ಮಹಾಭಾರತ—ವನಪರ್ವ
5. A History of Sanskrit Literature—A. B. Keith.

ಈ ಪುಸ್ತಕಗಳಿಗೆ ಋಣಿಯಾಗಿದ್ದೇನೆ.

## ಭಾರವಿ

ನಮ್ಮ ದೇಶದಲ್ಲಿ ಒಂದು ವಿಶೇಷ: ಕೆಲಸ ಆದದ್ದು ಕಣ್ಣಿಗೆ ಕಾಣುವಂತೆ ನಿಲ್ಲುತ್ತದೆ; ಕೆಲಸ ಮಾಡಿದವರನ್ನು ಕುರಿತು ಹೆಸರಿನಿಂದ ಆಚೆಗೆ ಹೆಚ್ಚು ತಿಳಿದಿರುವುದಿಲ್ಲ. ಕವಿಗಳ ವಿಷಯವಾಗಿಯೂ ಹೀಗೆಯೆ. ಭಾರವಿಯ ಸಂಗತಿಯೂ ಹೀಗೆಯೆ. ಜನಜನಿತವಾದ ದಂತಕಥೆಗಳು ಒಂದೆರಡು ಹೊರತಾಗಿ ಇವನ ವಿಷಯದಲ್ಲಿ ತಿಳಿದುಬಂದಿರುವ ಚಾರಿತ್ರಿಕ ವೃತ್ತಾಂತ ಹೆಚ್ಚೇನೂ ಇಲ್ಲ. 'ದಾಮೋದರ' ಎಂಬುದು ಇವನ ಹೆಸರಂತೆ; 'ಭಾರವಿ' ಎಂಬುದು ಇವನ ಪ್ರತಿಭೆಯನ್ನು ಸೂಚಿಸುವ ವಿಶಿಷ್ಟನಾಮವಂತೆ; ಇವನ ಕಾಲ ಕ್ರಿ.ಶ. ೫೫೦ ರಿಂದ ೬೦೦ ಎಂದು ಹೇಳಲು ಆಧಾರಗಳುಂಟು; ಇವನು ತನ್ನ ಜೀವನದ ಹೆಚ್ಚು ಭಾಗವನ್ನು ಕರ್ಣಾಟಕದಲ್ಲಿ ಕಳೆದನಂತೆ. ಇಷ್ಟು ಹೊರತು ಇವನ ವಿಷಯವಾಗಿ ಹೆಚ್ಚು ಗೊತ್ತಿಲ್ಲ.

## ಭಾರವಿಯ 'ಕಿರಾತಾರ್ಜುನೀಯ'

ಇದು ಹದಿನೆಂಟು ಸರ್ಗಗಳ ಮಹಾಕಾವ್ಯ. ಸರ್ಗಗಳೊಳಗಿನ ವಿಷಯ ಅನುಕ್ರಮವಾಗಿ ಹೀಗಿದೆ:

೧. ಧರ್ಮರಾಜನು ಹಸ್ತಿನಾಪುರಕ್ಕೆ ಕಳುಹಿಸಿದ್ದ ಗೂಢಚಾರನು ದುರ್ಯೋಧನನನ್ನು ಕುರಿತು ತಂದ ಸುದ್ದಿಯಿಂದ, ಧರ್ಮರಾಜನ ಮನಸ್ಸು ಕಲಕದೆ ಸಮಾಧಾನದಿಂದ ಇದ್ದರೂ, ದ್ರೌಪದಿಯ ಮನಸ್ಸು ಕಲಕಿ, ವನವಾಸ ಮುಗಿ

ಯುವ ಮೊದಲೇ ಯುದ್ಧ ಮಾಡಿ, ಶತ್ರುವನ್ನು ಅಡಗಿಸಬೇಕೆಂದು ಆಕೆ ವಾದಿಸುತ್ತಾಳೆ.

೨. ದ್ರೌಪದಿಯ ವಾದ ಭೀಮನಿಗೆ ಮೆಚ್ಚಿಕೆಯಾಗುತ್ತದೆ; ಆಕೆಯ ವಾದವನ್ನು ಸಮರ್ಥಿಸಿ ಆತ ಮಾತನಾಡುತ್ತಾನೆ. ಭೀಮನ ವಾದದ ವೈಖರಿಯನ್ನು ಒಪ್ಪುವುದಾದರೂ ಆತನ ವಾದದ ತಿರುಳನ್ನು ಒಪ್ಪಲಾಗದುದಕ್ಕೆ ಕಾರಣಗಳೇನೆಂಬುದನ್ನು ಧರ್ಮರಾಜನು ವಿವರಿಸುತ್ತಾನೆ. ಆತನ ವಿವರಣೆಗಳಿಂದ ಭೀಮನ ಕೋಪ ಶಾಂತವಾಗುವ ಹೊತ್ತಿಗೆ, ವ್ಯಾಸಮುನಿ ಅವರಲ್ಲಿಗೆ ಅನಿರೀಕ್ಷಿತವಾಗಿ ಬರುತ್ತಾನೆ.

೩. ವ್ಯಾಸನು ಧರ್ಮರಾಜನ ವರ್ತನೆಯನ್ನು ಪ್ರಶಂಸಿಸಿ, ದುರ್ಯೋಧನನನ್ನು ಸೋಲಿಸಬೇಕಾದರೆ ಅರ್ಜುನನು ದಿವ್ಯಾಸ್ತ್ರಗಳನ್ನು ಸಂಪಾದಿಸಿಕೊಂಡು ಬರಬೇಕೆಂದು ಬೋಧಿಸಿ, ಅದಕ್ಕೆ ಬೇಕಾದ ಯೋಗವನ್ನು ಅರ್ಜುನನಿಗೆ ಕಲಿಸಿಕೊಟ್ಟು, ಆತನ ಪ್ರಯಾಣಕ್ಕೆ ಒಬ್ಬ ಯಕ್ಷನನ್ನೂ ಒದಗಿಸುತ್ತಾನೆ. ಆ ಯಕ್ಷನೊಡನೆ ಅರ್ಜುನನು ಇಂದ್ರಕೀಲಕ್ಕೆ ತೆರಳುತ್ತಾನೆ.

೪. ಅರ್ಜುನನು ಹೊರಟ ಕಾಲ, ಚಕ್ರವರ್ತಿಗಳು ದಿಗ್ವಿಜಯಕ್ಕೆ ಹೊರಡುವ ಕಾಲ, ಶರತ್ಕಾಲ. ಈ ಸರ್ಗದಲ್ಲಿ ಕವಿ ತಾನು ಶರತ್ಕಾಲವನ್ನು ವರ್ಣಿಸಿ ತೃಪ್ತನಾಗದೆ, ಯಕ್ಷನಿಂದಲೂ ವರ್ಣನೆ ಮಾಡಿಸುತ್ತಾನೆ. ದಾರಿ ಅನಾಯಾಸವಾಗಿ ಸವೆದು, ಅರ್ಜುನ ಹಿಮವತ್‌ಪರ್ವತಕ್ಕೆ ಬರುತ್ತಾನೆ.

೫. ಐದನೆಯ ಸರ್ಗದ ತುಂಬ ಹಿಮವಂತದ ಸೌಂದರ್ಯದ ವರ್ಣನೆ, ಪಾರ್ವತೀಪರಮೇಶ್ವರರ ಆವಾಸಸ್ಥಾನವಾದ ಆ ಪರ್ವತದ ಮಹತ್ತ್ವ. ಇಂದ್ರಕೀಲದಲ್ಲಿ ತಪಸ್ಸು ಮಾಡುವಂತೆ ಹೇಳಿ, ಯಕ್ಷನು ಅಂತರ್ಧಾನವಾಗುತ್ತಾನೆ.

೬. ಅರ್ಜುನನು ಇಂದ್ರಕೀಲವನ್ನು ಹತ್ತಿ, ಅಲ್ಲಿ ತಪಸ್ಸಿಗೆ ಆರಂಭಿಸುತ್ತಾನೆ. ಆತನ ತಪಃಪ್ರಭಾವವನ್ನು ತಡೆಯಲಾರದೆ, ಅಲ್ಲಿನ ಗುಹ್ಯಕರು ಇಂದ್ರನ ಬಳಿ ಮೊರೆಯಿಡುತ್ತಾರೆ. ಅರ್ಜುನನ ತಪಸ್ಸನ್ನು ಭಂಗಮಾಡಲು ಇಂದ್ರನು ಗಂಧರ್ವರನ್ನೂ ಅಪ್ಸರೆಯರನ್ನೂ ಕಳುಹಿಸುತ್ತಾನೆ.

೭. ಗಂಧರ್ವರೂ ಅಪ್ಸರೆಯರೂ ವಾಯುಮಾರ್ಗವಾಗಿ ಬಂದು ಇಂದ್ರಕೀಲದಲ್ಲಿ ಪಾಳಯ ಹೊಡುತ್ತಾರೆ. ಅವರ ಆನೆಗಳ ವರ್ಣನೆ ಗಮನಾರ್ಹ.

೮. ಅಪ್ಸರೆಯರೂ ಗಂಧರ್ವರೂ ತಮ್ಮ ವಿಮಾನಗಳಿಂದ ಹೊರಟು, ವನ

ದಲ್ಲಿ ಹೂ ಬಿಡಿಸುತ್ತ ವಿಹರಿಸುತ್ತಾರೆ. ಗಂಗಾನದಿ ಅವರನ್ನು ಜಲಕ್ರೀಡೆಗೆ ಕರೆಯುತ್ತಾಳೆ. ಅವರ ಜಲಕ್ರೀಡೆಯ ವರ್ಣನೆ.

೯. ಸಂಧ್ಯಾಕಾಲವಾಗುತ್ತದೆ, ಸೂರ್ಯ ಮುಳುಗುತ್ತಾನೆ, ಚಂದ್ರ ಉದಯಿಸುತ್ತಾನೆ. ಗಂಧರ್ವರೂ ಅಪ್ಸರೆಯರೂ ಪಾನಮಾಡಿ ಮದಗೊಂಡು, ಮದನಕ್ರೀಡೆಯಲ್ಲಿ ತೊಡಗುತ್ತಾರೆ. ಬೆಳಗಾಗುತ್ತದೆ. ಇವೆಲ್ಲವುಗಳ ವರ್ಣನೆ.

೧೦. ಗಂಧರ್ವರೂ ಅಪ್ಸರೆಯರೂ ತಾವು ಬಂದ ಕೆಲಸಕ್ಕೆ ಮನಸ್ಸು ಕೊಡುತ್ತಾರೆ. ಆರು ಋತುಗಳೂ ಅವರ ಸಹಾಯಕ್ಕೆ ಬಂದು ನಿಲ್ಲುತ್ತವೆ. ಅರ್ಜುನನು ಸ್ಥಿರನಾಗಿ ನಿಂತು ಅವರು ಒಡ್ಡಿದ ಪ್ರಲೋಭನಗಳನ್ನೆಲ್ಲ ಗೆಲ್ಲುತ್ತಾನೆ. ಸ್ವರ್ಗದಿಂದ ಬಂದವರಿಗೆ ಆಶಾಭಂಗವಾಗುತ್ತದೆ.

೧೧. ತಾನು ಕಳುಹಿಸಿದವರಿಗೆ ಆದ ಸೋಲನ್ನು ತಿಳಿದು, ಇಂದ್ರನು ಮುನಿಯ ವೇಷದಲ್ಲಿ ತಾನೇ ಬರುತ್ತಾನೆ. ಅರ್ಜುನನ ಚಿತ್ತಸ್ಥೈರ್ಯವನ್ನೂ ಸತ್ತ್ವವನ್ನೂ ಮೆಚ್ಚಿ, ಆತನಿಗೆ ಒಲಿಯುತ್ತಾನೆ. ತಪಸ್ಸಿಗೆ ನಿಂತವನು ಕ್ಷತ್ರಿಯೋಚಿತವಾದ ಆಯುಧಗಳನ್ನು ಧರಿಸಿರುವುದರ ಔಚಿತ್ಯವನ್ನು ಕುರಿತು ಅವರಿಬ್ಬರಿಗೂ ವಾದವಿವಾದ ನಡೆಯುತ್ತದೆ. ಇಂದ್ರನು ಅರ್ಜುನನ ಮಾತುಗಳಿಂದ ಪ್ರೀತನಾಗಿ, ತನ್ನ ನಿಜಸ್ವರೂಪದಿಂದ ಕಾಣಿಸಿಕೊಂಡು, ಶಿವನನ್ನು ಆರಾಧಿಸುವಂತೆ ಉಪದೇಶಮಾಡುತ್ತಾನೆ.

೧೨. ಅದರಂತೆ, ಶಿವನನ್ನು ಆರಾಧಿಸುತ್ತಾ ಅರ್ಜುನನು ತಪಸ್ಸು ಮುಂದುವರಿಸುತ್ತಾನೆ. ಆತನ ತಪಸ್ಸಿನ ತೀವ್ರತೆಯಿಂದ ಅಲ್ಲಿನ ತಾಪಸರು ಬೇಗೆಪಟ್ಟು, ಶಿವನಲ್ಲಿ ಮೊರೆಯಿಡುತ್ತಾರೆ. ನಾರಾಯಣನ ಅಂಶವಾದ ನರನೇ ಅರ್ಜುನನ ರೂಪದಿಂದ ಅವತರಿಸಿರುವನೆಂಬ ರಹಸ್ಯವನ್ನು ತಿಳಿಸಿ, ಶಿವನು ಅವರನ್ನು ಸಂತೈಸುತ್ತಾನೆ. ಮೂಕನೆಂಬ ದಾನವನು ಹಂದಿಯ ರೂಪದಿಂದ ಅರ್ಜುನನನ್ನು ವಧಿಸಲಿರುವನೆಂಬುದನ್ನು ತಿಳಿದು ಅರ್ಜುನನ ರಕ್ಷೆಗಾಗಿ ತಾನು ಕಿರಾತವೇಷದಿಂದ, ತನ್ನ ಗಣಗಳಿಗೂ ಕಿರಾತವೇಷ ಹಾಕಿ ಕರೆದುಕೊಂಡು, ಇಂದ್ರಕೀಲಕ್ಕೆ ಬರುತ್ತಾನೆ.

೧೩. ಅರ್ಜುನನ ಮೇಲೆ ನುಗ್ಗಿಬಂದ ಹಂದಿ, ಅರ್ಜುನನ ಬಾಣದಿಂದಲೂ ಶಿವನ ಬಾಣದಿಂದಲೂ ಹತವಾಗಿ ಬೀಳುವುದು. ಅರ್ಜುನನು ತನ್ನ ಬಾಣವನ್ನು ಎಳೆದುಕೊಳ್ಳಲು ಬಂದಾಗ, ಕಿರಾತವೇಷದ ಶಿವನ ಕಡೆಯ ಕಿರಾತ

ನೊಬ್ಬನಿಗೂ ಅರ್ಜುನನಿಗೂ ಬಾಣದ ವಿಷಯವಾಗಿ ವಾಗ್ವಾದ ನಡೆಯುವುದು.

೧೪. ಹಂದಿಯನ್ನು ಕೊಂದ ಬಾಣ ತನ್ನ ಒಡೆಯನದು ಎಂಬ ಕಿರಾತನ ವಾದವನ್ನು ಅರ್ಜುನನು ನಿರಾಕರಿಸುವನು; ಅವನ ಒಡೆಯನನ್ನೇ ಯುದ್ಧಕ್ಕೆ ಕರೆಯುವನು. ಕಿರಾತವೇಷದ ಶಿವನ ಸೈನ್ಯಕ್ಕೂ ಅರ್ಜುನನಿಗೂ ಯುದ್ಧ ತೊಡಗುವುದು.

೧೫. ಅರ್ಜುನನ ಏಟುಗಳನ್ನು ತಾಳಲಾರದೆ ಓಡಿಹೋಗುತ್ತಿದ್ದ ಕಿರಾತ ಸೇನೆಯನ್ನು ಸ್ಕಂದನೂ ಶಿವನೂ ಸಂವರಿಸುವರು. ಅನಂತರ ಅರ್ಜುನನಿಗೂ ಕಿರಾತಶಿವನಿಗೂ ಕಾಳಗ ಆರಂಭವಾಗುತ್ತದೆ.

೧೬. ಕಾಳಗದಲ್ಲಿ ಅರ್ಜುನನ ಕೈ ಕೀಳಾಗುತ್ತದೆ. ಎದುರಾಳಿಯ ಹಿರಿಮೆಯನ್ನು ಕಂಡು ಆತನಿಗೆ ವಿಸ್ಮಯವಾಗುತ್ತದೆ.

೧೭. ಆದರೂ ಅರ್ಜುನನು ಎದೆಗುಂದದೆ, ತನ್ನ ಬಿಲ್ಲಿನಿಂದ, ತನ್ನ ಖಡ್ಗದಿಂದ, ಬಂಡೆಗಳಿಂದ, ವೃಕ್ಷಗಳಿಂದ ಕಿರಾತನನ್ನು ಹೊಡೆದು ಸೋಲಿಸಲು ಯತ್ನಿಸಿ ವಿಫಲನಾಗುವನು.

೧೮. ಬಳಿಕ ಇಬ್ಬರಿಗೂ ಮುಷ್ಟಿಯುದ್ಧ ನಡೆಯುವುದು. ಕಡೆಗೆ ಬಾಹುಯುದ್ಧ ನಡೆಯುವುದು. ಆಗ ಶಿವನು ತನ್ನ ಸ್ವರೂಪದಿಂದ ಪ್ರತ್ಯಕ್ಷನಾಗುತ್ತಾನೆ. ಅರ್ಜುನನು ವಿನೀತನಾಗಿ, ಮಹಾದೇವನನ್ನು ಸ್ತೋತ್ರಮಾಡಿ, ತನಗೆ ಶಕ್ತಿಯನ್ನೂ ವಿಜಯವನ್ನೂ ಕರುಣಿಸಬೇಕೆಂದು ವರ ಬೇಡುತ್ತಾನೆ. ಶಿವನು ಪಾಶುಪತವನ್ನು ಅರ್ಜುನನಿಗೆ ಉಪದೇಶಿಸುತ್ತಾನೆ. ಇಂದ್ರನೂ ಇತರ ದಿಕ್ಪಾಲಕರೂ ಅರ್ಜುನನ ಭಕ್ತಿಗೆ ಪ್ರೀತರಾಗಿ, ಇತರ ದಿವ್ಯಾಯುಧಗಳನ್ನು ಅನುಗ್ರಹಿಸುತ್ತಾರೆ. ಅರ್ಜುನನು ಕೃತಕೃತ್ಯನಾಗುತ್ತಾನೆ.

ಇದು 'ಕಿರಾತಾರ್ಜುನೀಯ'ದ ಹದಿನೆಂಟು ಸರ್ಗಗಳ ಸಾರಾಂಶ.

## 'ಕಿರಾತಾರ್ಜುನೀಯ'ದ ಮೂಲ

'ಕಿರಾತಾರ್ಜುನೀಯ'ಕ್ಕೆ ಮೂಲ ವ್ಯಾಸರ ಶ್ರೀ ಮಹಾಭಾರತ. ಅರಣ್ಯಪರ್ವದೊಳಗಿನ 'ಅರ್ಜುನಾಭಿಗಮನಪರ್ವ' ಎಂಬ ಎರಡನೆಯ ಉಪಪರ್ವದ ಉತ್ತರಾರ್ಧವೂ 'ಕೈರಾತಪರ್ವ' ಎಂಬ ಮೂರನೆಯ ಉಪಪರ್ವವೂ ಈ ಕಾವ್ಯಕ್ಕೆ ವಸ್ತುವನ್ನು ಒದಗಿಸಿವೆ.

(‘ಕೈರಾತಪರ್ವ’ದಲ್ಲಿ ಶಿವನೊಡನೆ ನಡಸಿದ ಹೋರಾಟದಲ್ಲಿ ಒಂದು ಬಗೆಯಾಗಿ ಅರ್ಜುನನ ಸತ್ತ್ವಪರೀಕ್ಷೆ ನಡೆದರೆ, ನಾಲ್ಕನೆಯ ‘ಇಂದ್ರಲೋಕಾಭಿಗಮನಪರ್ವ’ದಲ್ಲಿ ಊರ್ವಶಿಯ ಪ್ರಕರಣದಲ್ಲಿ ಇನ್ನೊಂದು ಬಗೆಯಾಗಿ ಅರ್ಜುನನ ಸತ್ತ್ವಪರೀಕ್ಷೆ ನಡೆಯುತ್ತದೆ. ಅದು ಅಲ್ಲಿಗೆ ಪ್ರಕೃತ; ಆದರೆ ಇಲ್ಲಿಗೆ ಅಪ್ರಕೃತ. ಮೊದಲನೆಯದರಲ್ಲಿ ಆತನ ದೇಹಬಲವೂ ಎರಡನೆಯದರಲ್ಲಿ ಆತ್ಮಬಲವೂ ಪರೀಕ್ಷೆಗೆ ಒಳಗಾಗಿ, ಎರಡರಲ್ಲಿಯೂ ವಿಜಯಿಯಾಗುತ್ತಾನೆ.)

ಮೂಲದ ಸಾಮಗ್ರಿಯನ್ನು ಹೀಗೆ ಸಂಗ್ರಹಿಸಬಹುದು:*

ಪಾಂಡವರು ಕಾಮ್ಯಕವನದಿಂದ ದ್ವೈತವನಕ್ಕೆ ಬಂದು ಅಲ್ಲಿ ವಾಸಿಸುತ್ತಿರುವಾಗ, ಒಮ್ಮೆ ದ್ರೌಪದಿಯು ತನಗೆ ಆದ ಅವಮಾನದ ದುಃಖವನ್ನು ಭೀಮಾದಿಗಳ ಮುಂದೆ ಹೇಳಿಕೊಂಡು, ಕ್ಷಮೆಗೂ ಕ್ರೋಧಕ್ಕೂ ಉಚಿತವಾದ ಕಾಲವುಂಟೆಂದು ಹೇಳಿ, ದುರ್ಯೋಧನನು ಕ್ಷಮಾರ್ಹನಲ್ಲವೆಂದು ವಾದಿಸುವಳು. ಕೋಪದಿಂದ ಆಗುವ ದೋಷಗಳನ್ನು ಧರ್ಮರಾಜನು ಆಕೆಗೆ ವಿವರಿಸಿ, ಸಮಾಧಾನ ಹೇಳುವನು. ತನ್ನ ಕಷ್ಟಗಳಿಗಿಂತ ತನ್ನ ಪತಿಗಳ ಕಷ್ಟವೇ ತನಗೆ ಹೆಚ್ಚು ದುಸ್ಸಹವೆಂದೂ, ಧರ್ಮಕ್ಕಿಂತ ದೈವವೇ ದೊಡ್ಡದೆಂದೂ ದ್ರೌಪದಿ ವಾದಿಸಿದಾಗ ಧರ್ಮವು ಎಂದಿಗೂ ವಿಫಲವಲ್ಲವೆಂದು ಧರ್ಮರಾಜನು ಹೇಳಿದರೂ, ದ್ರೌಪದಿ ಪುನಃ ಧರ್ಮರಾಜನಿಗೆ ಬೃಹಸ್ಪತಿಯ ನೀತಿಯನ್ನು ಜ್ಞಾಪಿಸಿಕೊಡುವಳು.

ಆಕೆಯ ಮಾತಿಗೆ ಬೆಂಬಲವಾಗಿ ಭೀಮನು ಯುದ್ಧಮಾಡಿಯೇ ರಾಜ್ಯವನ್ನು ಸಂಪಾದಿಸಬೇಕೆಂದು ನೀತಿಪೂರ್ವಕವಾಗಿ ವಾದಿಸುವನು. ತನ್ನ ಪ್ರತಿಜ್ಞೆಯನ್ನು ತಾನು ಮುರಿಯಲಾರೆನೆಂದೂ ಹದಿಮೂರು ವರ್ಷದ ಗಡುವು ಮುಗಿಯುವವರೆಗೆ ದುಡುಕಬಾರದೆಂದೂ ಧರ್ಮರಾಯನು ಹೇಳುವನು. ವನವಾಸ ಮುಗಿಸುವ ಮೊದಲೇ ದುರ್ಯೋಧನನನ್ನು ಯುದ್ಧದಲ್ಲಿ ಮುಗಿಸಬೇಕೆಂದು ಭೀಮನು ಪುನಃ ಹಟ ಮಾಡುವನು.

---

*ಹೆಚ್ಚಿನ ವಿವರಗಳಿಗೆ ಶ್ರೀ ಎ. ಆರ್. ಕೃಷ್ಣ ಶಾಸ್ತ್ರೀ ಅವರ ‘ವಚನ ಭಾರತ’ ನೋಡಿ: ದ್ರೌಪದಿ, ಧರ್ಮರಾಜ, ಭೀಮ ಇವರ ಸಂವಾದ (ಪುಟ ೧೧೭-೧೨೪); ಅರ್ಜುನನು ಪ್ರತಿಸ್ಮೃತಿಯನ್ನು ಪಡೆದು, ಇಂದ್ರನನ್ನು ಆರಾಧಿಸಿ, ಶಿವನೊಡನೆ ಹೋರಾಡಿ, ಪಾಶುಪತವನ್ನು ಪಡೆದದ್ದು (೧೨೪-೧೨೬); ಅರ್ಜುನನು ಸ್ವರ್ಗದಲ್ಲಿ ಐದು ವರ್ಷ ವಾಸಿಸಿದ್ದು (೧೨೬-೧೨೭).

ಹೀಗೆ ವಾದವಿವಾದ ನಡೆಯುತ್ತಿರುವಾಗ, ವ್ಯಾಸನು ಅಲ್ಲಿಗೆ ಬಂದು, ಧರ್ಮ ರಾಜನಿಗೆ ಪ್ರತಿಸ್ಮೃತಿ ಎಂಬ ವಿದ್ಯೆಯನ್ನು ಉಪದೇಶಿಸಿ ಹೋಗುವನು. ವ್ಯಾಸನ ಸೂಚನೆಯಂತೆ ಧರ್ಮರಾಯನು ತನ್ನ ಪರಿವಾರದೊಡನೆ ಮತ್ತೆ ಕಾಮ್ಯಕವನಕ್ಕೆ ಹಿಂದಿರುಗುವನು.

ಅಲ್ಲಿಗೆ ಬಂದ ಮೇಲೆ ಒಂದು ದಿನ, ಧರ್ಮರಾಜನು ಅರ್ಜುನನಿಗೆ ತಾನು ಪಡೆದ ಪ್ರತಿಸ್ಮೃತಿ ವಿದ್ಯೆಯನ್ನು ಉಪದೇಶಿಸಿ, ಆತನನ್ನು ಇಂದ್ರಕೀಲಕ್ಕೆ ಕಳಿಸುವನು. ಅರ್ಜುನನು ಅಲ್ಲಿ ತಪಸ್ಸು ಮಾಡುತ್ತಿರುವಾಗ ಇಂದ್ರನು ಪ್ರತ್ಯಕ್ಷನಾಗಿ, ಶಿವನನ್ನು ಆರಾಧಿಸುವಂತೆ ಆತನಿಗೆ ಹೇಳುವನು.

ಇಲ್ಲಿಗೆ 'ಅರ್ಜುನಾಭಿಗಮನ ಪರ್ವ' ಮುಗಿಯಿತು.

ಅರ್ಜುನನ ತಪಸ್ಸಿನಿಂದ ತಾಪಗೊಂಡ ತಾಪಸರು ಶಿವನಲ್ಲಿ ಮೊರೆಯಿಡು ವರು. ಶಿವನು ಅವರಿಗೆ ಅಭಯ ಹೇಳಿ, ಕಿರಾತವೇಷದಿಂದ ಬಂದು, ಅರ್ಜುನ ನೊಡನೆ ಹೋರಾಡುವನು. ಅರ್ಜುನನು ಸೋತು, ಶಿವನನ್ನು ಸ್ತುತಿಸಿ, ಪೂಜಿ ಸುವನು. ಆತನ ಸ್ತೋತ್ರದಿಂದಲೂ ಪೂಜೆಯಿಂದಲೂ ಪ್ರೀತನಾದ ಶಿವನು ಪಾಶುಪತವನ್ನು ಅನುಗ್ರಹಿಸುವನು. ದಿಕ್ಪಾಲಕರು ತಾವೂ ದಿವ್ಯಾಸ್ತ್ರಗಳನ್ನು ಅರ್ಜುನನಿಗೆ ಕರುಣಿಸುವರು.

ಇಲ್ಲಿಗೆ 'ಕೈರಾತ ಪರ್ವ' ಮುಗಿಯಿತು.

## ಮಹಾ ಅರಣ್ಯದಿಂದ ಮನೋರಮವಾದ ಉದ್ಯಾನ

ವ್ಯಾಸಭಾರತ ಒಂದು ಮಹಾ ಅರಣ್ಯ. ಅದರೊಳಗಿನ ಅರಣ್ಯಪರ್ವದಿಂದ ಒಂದು ಭಾಗವನ್ನು ಆಯ್ದುಕೊಂಡು, ಭಾರವಿ, ತನಗೆ ಬೇಕಾದ್ದನ್ನು ಉಳಿಸಿ ಕೊಂಡು, ಬೇಡವಾದ್ದನ್ನು ಕತ್ತರಿಸಿಹಾಕಿ, ಜೊತೆಗೆ ಹೊಂದತಕ್ಕುವನ್ನು ಹೊಸದಾಗಿ ತಂದು ಬೆಳಸಿ, ಒಂದು ಸೊಗಸಾದ ಉದ್ಯಾನವನವನ್ನು ಸೃಷ್ಟಿಸಿ ದ್ದಾನೆ. ಅದರಿಂದ ಮೂಲದ ಹಳೆಯ ಗಾಂಭೀರ್ಯಕ್ಕೆ ಹೊಸದಾದ ರಮ್ಯತೆ ಬಂದು ಸೇರಿದೆ. 'ಕಿರಾತಾರ್ಜುನೀಯ'ದ ಮೊದಲನೆಯ ಮೂರು ಸರ್ಗಗಳಲ್ಲಿ ವ್ಯಾಸರ ಹಳೆಯದೂ ಭಾರವಿಯ ಹೊಸದೂ ಹೇಗೆ ಸೇರಿಕೊಂಡಿವೆ ಎಂಬುದನ್ನು ಗಮನಿಸೋಣ.

ಭಾರತದ ದ್ರೌಪದಿಗೆ ಕೌರವರ ಮೇಲೆ ಕೆರಳುವುದಕ್ಕೆ ಕಾರಣವೇ ಬೇಕಾಗು

ವುದಿಲ್ಲ; ಆಕೆಯ ಅವಮಾನದ ಬೆಂಕಿ ಸದಾ ಹೊಗೆಯಾಡುತ್ತ, ಆಗಾಗ್ಗೆ ಭುಗ್ಗೆಂದು ನಾಲಗೆ ಚಾಚುತ್ತದೆ. ಆದರೆ ಭಾರವಿಯ ದ್ರೌಪದಿ ಕೆರಳುವುದೂ ಸ್ತ್ರೀ ಸಹಜವಾದ ಲಜ್ಜೆಯನ್ನು ಒತ್ತರಿಸಿ ಮಾತನಾಡುವುದೂ ಗೂಢಚಾರನು ದುರ್ಯೋಧನನ ರಾಜ್ಯವಶೀಕರಣವಿದ್ಯೆಯನ್ನು ವಿವರಿಸಿದ ಮೇಲೆ. ದ್ರೌಪದಿಯ ವರ್ತನೆ ಅಲ್ಲಿ ಭೀಮವಾಗಿದೆ, ಇಲ್ಲಿ ಶಾಂತವಾಗಿದೆ.

ದುರ್ಯೋಧನನ ರಾಜ್ಯಕ್ಕೆ ವಟುವೇಷದಲ್ಲಿ ಹೋಗಿ ಬಂದ ಕಿರಾತ ಭಾರತ ದಲ್ಲಿಲ್ಲ. ಇವನು ಭಾರವಿಯ ಸೃಷ್ಟಿ. ಇವನ ಸೃಷ್ಟಿಯಿಂದ ಧರ್ಮರಾಜನಿಗೆ ಒಂದು ಹೊಸ ಮುಖ ಹುಟ್ಟಿಕೊಂಡಿದೆ. ಹದಿಮೂರು ವರ್ಷ ಮುಗಿಯುವ ವರೆಗೆ ತಾನು ಯುದ್ಧಮಾಡದವನಾದರೂ, ಹದಿಮೂರು ವರ್ಷದ ಕೊನೆಗೆ ಯುದ್ಧವಾಗಲೇಬೇಕೆಂಬುದನ್ನೂ, ಅದಕ್ಕೆ ಈಗಿನಿಂದಲೇ ಸಿದ್ಧತೆಮಾಡಿಕೊಳ್ಳು ವುದು ತನ್ನ ಕರ್ತವ್ಯವೆಂಬುದನ್ನೂ ಆತ ಮರೆತಿಲ್ಲ. ಈ ಕರ್ತವ್ಯಜ್ಞಾನದಿಂದಲೇ ಆತ ಕಿರಾತನನ್ನು ಕಳಿಸಿದ್ದು. ದೂತನಾಗಿ ಹೋದ ಕಿರಾತನಾದರೂ ನಾಡಾಡಿ ಯಲ್ಲ; ದೌತ್ಯವನ್ನು ಯಶಸ್ವಿಯಾಗಿ ನಡಸಬೇಕಾದವರಿಗೆ ಆದರ್ಶಪ್ರಾಯನಾದ ವನು. ಅಂಥವನನ್ನೇ ಆರಿಸಿ ಕಳಿಸಿದ ಧರ್ಮರಾಜನ ಔಚಿತ್ಯಜ್ಞಾನವೂ ಮೆಚ್ಚ ಬೇಕಾದ್ದೇ. ಇದೂ ಅಲ್ಲದೆ, ಮೂಲದಲ್ಲಿ ಇಲ್ಲದ ಕಿರಾತನನ್ನು ಇಲ್ಲಿ ಮೊದಲಿಗೇ ತಂದು, ಆತನಿಂದ ಪಾಂಡವರ ಹಿತವನ್ನು ಹೇಳಿಸತೊಡಗಿದ ಭಾರವಿ, ತನ್ನ 'ಕಿರಾತಾರ್ಜುನೀಯ'ದಲ್ಲಿ ಕಿರಾತವೇಷದ ಶಿವನಿಂದ ಪಾಂಡವರ ಹಿತರಕ್ಷಣೆ ಯಾಗುತ್ತದೆ ಎಂಬುದನ್ನು ಮನೋಜ್ಞವಾಗಿ ಸೂಚಿಸಿದ್ದಾನೆ.

'ಕಿರಾತಾರ್ಜುನೀಯ'ದ ಕಥೆಯಲ್ಲಿ ಕೌರವ ಕಂಗೊಳಿಸುವುದಕ್ಕೆ ಅವಕಾಶ ಸಹಜವಾಗಿ ಇಲ್ಲ. ಪಾಂಡವರ, ದ್ರೌಪದಿಯ ಮಾತುಗಳಲ್ಲಿ ಆತನು ಬರುವು ದಾದರೂ, ಬಂದಾಗ ಕಣ್ಣು ಕುಕ್ಕಬಹುದೇ ಹೊರತು ಕಂಗೊಳಿಸುವಂತಿಲ್ಲ. ಆದರೆ, ದುರ್ಯೋಧನನು ಎಷ್ಟು ದುಷ್ಟನಾದರೂ, ದುರ್ವಿನೀತನಾದರೂ, ಧರ್ಮ ರಾಜನೊಡನೆ ಹೋರಾಡಿದನಾದರೂ, 'ಸಗಣಿಯವನೊಡನೆ ಸರಸಕ್ಕಿಂತ ಗಂಧ ದವನೊಡನೆ ಗುದ್ದಾಟ ಲೇಸು' ಎಂಬ ಗಾದೆ ಪೂರ ಸುಳ್ಳಾಗಲಾರದು. ಆದ್ದ ರಿಂದ ಧರ್ಮರಾಜನ ಗುಣಗಳನ್ನು ಆತ ಅವಶನಾಗಿ ಅನುಕರಣ ಮಾಡತೊಡಗಿ ದ್ದಾನೆ. ಅದು 'ನವಿಲನ್ನು ನೋಡಿ ಕೆಂಬೂತ ಗರಿ ಸಿಕ್ಕಿಸಿಕೊಂಡ ಹಾಗೆ' ತಾತ್ಕಾಲಿಕವಾಗಿ ವ್ಯವಹಾರಚತುರತೆಯಿಂದ ಕೌರವನು ಎತ್ತಿಕೊಂಡ ಉತ್ತ

ಮಿಕೆಯಾಗಿರಬಹುದಾದರೂ, ಅವನಲ್ಲಿ ಅಷ್ಟು ಮಟ್ಟಿನ ಪರಿವರ್ತನೆಯನ್ನಾದರೂ ಉಂಟುಮಾಡಿದ್ದು ಧರ್ಮರಾಜನ ಪ್ರಭಾವ. ಇದನ್ನು ವಿವರಿಸುವುದಕ್ಕೋಸ್ಕರವಾಗಿ ಭಾರವಿ ಕಿರಾತದೂತನನ್ನು ತಂದುಕೊಂಡಿರುವುದು ಆತನ ಕಲಾನಿಪುಣತೆಗೆ ಸಾಕ್ಷಿ.

ಭಾರತದಲ್ಲಿ ದ್ರೌಪದಿಯೂ ಧರ್ಮರಾಜನೂ ಭೀಮನೂ ಕ್ರೋಧ ಕ್ಷಮೆಗಳ ಪಕ್ಷಗಳನ್ನು ಹಿಡಿದು ಮೇಲಿಂದ ಮೇಲೆ ವಾದ ಮಾಡುವುದು ಅವರಿಗೆ ಒಂದು ಬಗೆಯ ಸರಿಸಮಾನಸ್ಕಂಧತೆಯನ್ನು ಕೊಟ್ಟಂತಿದೆ. ದ್ರೌಪದಿಯ, ಭೀಮನ ಕೋಪತಾಪಗಳೂ ನೀತಿಬೋಧೆಗಳೂ ಸ್ವಲ್ಪ ಗೆರೆ ದಾಟಿ ಹೋದ ಹಾಗಿವೆ. ಧರ್ಮರಾಜನು ಅವರಿಗೆ ಸಮಾಧಾನ ವಾಕ್ಯಗಳನ್ನು ಹೇಳುವನಾದರೂ, ಅವರ ಮಾತುಗಳಿಂದ ಅವನೂ ಖಿನ್ನನಾಗಿದ್ದಾನೆ. ಆದರೆ ಭಾರವಿ, ದ್ರೌಪದಿ ಮತ್ತು ಭೀಮ ಧರ್ಮರಾಜನ ಉತ್ತರಕ್ಕೆ ಪ್ರತಿಯಾಗಿ ಏನೇನು ಹೇಳಿದರೋ ಅದನ್ನೆಲ್ಲ ಕ್ರೋಡೀಕರಿಸಿ, ಅವರು ಹೇಳಬೇಕಾದ್ದನ್ನೆಲ್ಲ ಒಂದೇ ಸಲ ಅಡಕವಾಗಿ ಹೇಳಿಸಿದ್ದಾನೆ. ದ್ರೌಪದಿ ತಾನು ಹೇಳಬೇಕಾದ್ದನ್ನು ಅಶೇಷವಾಗಿ ಹೇಳಿ ಮುಗಿಸಿದ ಮೇಲೆ, ಭೀಮ ಆಕೆಯ ವಾದವನ್ನು ಶಾಸ್ತ್ರಾಧಾರದಿಂದ ಸಮರ್ಥಿಸುತ್ತಾನೆ. ಅವರಿಬ್ಬರ ವಾದಗಳನ್ನೂ ಸಮಾಧಾನದಿಂದ ಕೇಳಿಕೊಂಡ ಮೇಲೆ ಧರ್ಮರಾಯನು ಸಮುದ್ರದ ಗಾಂಭೀರ್ಯದಿಂದ ಅವರ ವಾದಗಳ ಟೊಳ್ಳನ್ನು ತೋರಿಸಿ, ತನ್ನ ನೀತಿಯನ್ನು ವಿವರಿಸಿ ಸಮರ್ಥಿಸುತ್ತಾನೆ. ಧರ್ಮರಾಜನ ರಾಜನೀತಿಯನ್ನು ಸಾಕ್ಷೀಕರಿಸುವ ಹಾಗೆ ವ್ಯಾಸನು ಆಗ ಪ್ರತ್ಯಕ್ಷನಾಗುತ್ತಾನೆ. ಹೀಗೆ, ಮೂಲ ಭಾರತವನ್ನು ರೂಪುಗೆಡಿಸದೆ, ಮಾಡಿಕೊಂಡ ಕೆಲವು ಸಣ್ಣಪುಟ್ಟ ವ್ಯತ್ಯಾಸಗಳಿಂದ ಭಾರವಿಯು ಈ ಪ್ರಕರಣದೊಳಗಿನ ಮೂರು ಪಾತ್ರಗಳ ಘನತೆಯ ಮೇಲೆ ಹೆಚ್ಚು ತೋರುಬೆಳಕು ಬಿಟ್ಟಿದ್ದಾನೆ.

ವ್ಯಾಸನನ್ನು ತಂದಿರುವಾಗಲೂ ಹೀಗೆಯೆ. ಭಾರತದಲ್ಲಿ ವ್ಯಾಸನು ಅರ್ಜುನನಿಗೆ ತಿಳಿದಿರಬೇಕಾದ ವಿದ್ಯೆಯನ್ನು ಧರ್ಮರಾಜನಿಗೆ ರಹಸ್ಯವಾಗಿ ತಿಳಿಸುವನು; ಅನಂತರ ದ್ವೈತವನದಿಂದ ಕಾಮ್ಯಕವನಕ್ಕೆ ಹೋದ ಮೇಲೆ, ಧರ್ಮರಾಜನು ಆ ವಿದ್ಯೆಯನ್ನು ಅರ್ಜುನನಿಗೆ ಉಪದೇಶಿಸುವನು. ಭಾರವಿಯಾದರೋ, ವನದಿಂದ ವನಕ್ಕೆ ಹೋದ ಅನವಶ್ಯಕವಾದ ಪ್ರಯಾಣವನ್ನು ತಪ್ಪಿಸಿದ್ದಾನೆ; ನಡೆಯುವುದೆಲ್ಲ ದ್ವೈತವನದಲ್ಲಿಯೇ. ಅರ್ಜುನನೇ ಆ ವಿದ್ಯೆಯಿಂದ ದಿವ್ಯಾಸ್ತ್ರ

ಗಳನ್ನು ಸಂಪಾದಿಸಬೇಕೆಂದಿರುವಾಗ, ವ್ಯಾಸನು ಧರ್ಮರಾಜನಿಗೆ ಉಪದೇಶಿಸಿ, ಧರ್ಮರಾಜನು ಅರ್ಜುನನಿಗೆ ಉಪದೇಶಿಸಬೇಕಾದ ಅಗತ್ಯವೇನು? ಭಾರವಿ ಈ ದ್ರಾವಿಡಪ್ರಾಣಾಯಾಮವನ್ನು ತಪ್ಪಿಸಿ, ಧರ್ಮರಾಜನ ಸಮ್ಮುಖದಲ್ಲಿ ವ್ಯಾಸನು ಅರ್ಜುನನಿಗೆ ಮಂತ್ರೋಪದೇಶ ಮಾಡುವ ಸಂದರ್ಭವನ್ನು ಕಲ್ಪಿಸಿದ್ದಾನೆ. ಆ ಸಂದರ್ಭದಲ್ಲಿ ವಂಶದ ಹಿರಿಯನೂ ತಪಸ್ವಿಯೂ ಆದವನು ಆಡತಕ್ಕವಾದ ಆಣಿ ಮುತ್ತಿನ ಮಾತುಗಳನ್ನು ವ್ಯಾಸನ ಮುಖದಿಂದ ಭಾರವಿ ಆಡಿಸಿದ್ದಾನೆ. ಈ ಮಾತುಗಳಲ್ಲಿ ಧರ್ಮರಾಜನ ಅನುತ್ತರ ಗುಣಬಾಹುಳ್ಯವೂ ದುರ್ಯೋಧನನ ಅವಿವೇಕ ಮೂರ್ಖತೆಗಳೂ ವರ್ಣಿತವಾಗಿವೆ. ದ್ರೌಪದಿ, ಭೀಮರುಗಳ ಕೋಪಾಲಾಪಗಳ ಬೆಂಬಳಿಯಲ್ಲಿಯೇ ಧರ್ಮರಾಜನ ಅಸಮಾನವಾದ ಸಹನೆ ಯನ್ನು ಚಿತ್ರಿಸಿ, ಅದರ ಹಿಂದೆಯೇ ವ್ಯಾಸನ ಶಾಂತಮೂರ್ತಿಯನ್ನು ತಂದು ನುಡಿಸಿರುವುದು ಗೋಪುರಕ್ಕೆ ಬಂಗಾರದ ಕಳಶವಿಟ್ಟಹಾಗಿದೆ.

ವ್ಯಾಸನು ತಾನಾಗಿಯೇ ಪಾಂಡವರ ಬಳಿಗೆ ಬಂದು, ತಾನಾಗಿಯೇ ಧರ್ಮ ರಾಜನಿಗೆ ಜಯೋಪಾಯವನ್ನು ತಿಳಿಸಿ, ತಾನಾಗಿಯೇ ಅರ್ಜುನನಿಗೆ ಮಂತ್ರೋಪದೇಶ ಮಾಡಿರುವಾಗ, ಮೂಲಭಾರತದಲ್ಲಿ ಇರುವ ಹಾಗೆ ಅರ್ಜುನನು ದ್ವೈತವನದಿಂದ ಹಿಮವತ್ಪರ್ವತಕ್ಕೆ ನಡೆದು ಹೋಗಬೇಕೆ? ಹಿಮವಂತನ ಹತ್ತಿರ ಬಂದಾಗ ಮನೋವೇಗದಿಂದ ಪರ್ವತಾರೋಹಣ ಮಾಡಿದನಂತೆ, ಇರಲಿ. ಭಾರವಿ, ಅದನ್ನು ಬದಲಾಯಿಸಿದ್ದಾನೆ. ವ್ಯಾಸನು ತನ್ನ ತಪಸ್ಸಿನ ಸಾಮರ್ಥ್ಯದಿಂದ ಅರ್ಜುನನಿಗೆ ವಾಹನವಾಗಿ ಒಬ್ಬ ಯಕ್ಷನನ್ನು ಒದಗಿಸಿದ್ದಾನೆ. ಅವನ ಸಹಾಯದಿಂದ ಅರ್ಜುನನು ವೇಗವಾಗಿ ಆಶ್ರಮದಿಂದ ಇಂದ್ರಕೀಲವನ್ನು ಸೇರುವನು.

ಭಾರತದ ವನಪ್ರದೇಶವನ್ನು ವಹಿಸಿಕೊಂಡರೂ, ತನ್ನ ಕೆಲವು ಕೈವಾಡ ಗಳನ್ನು ತೋರಿಸಿ, ಭಾರವಿ 'ಕಿರಾತಾರ್ಜುನೀಯ'ದ ಮೊದಲನೆಯ ಮೂರು ಸರ್ಗಗಳಲ್ಲಿ ಒಂದು ಮನೋರಮವಾದ ತೋಟವನ್ನು ನಿರ್ಮಿಸಿದ್ದಾನೆ. ತೋಟಕ್ಕೆ ಮೂಲಮಾತೃಕೆಯಾದ ಮಹಾಭಾರತದ ಕಾಡಿನಲ್ಲಿ ಓಡಿಯಾಡಿ ಬಂದವರಿಗೆ ಈ ತೋಟ ಆ ಕಾಡಿಗಿಂತ ಬೇರೆಯೆನ್ನಿಸಿದರೂ, ಇದುಕೂಡ ಆ ಮಹಾರಣ್ಯದ ವಂಶದ ಮಗುವೇ ಎಂದು ಪ್ರೀತಿ ಗೌರವಗಳು ಉಂಟಾಗುತ್ತವೆ.

## 'ಕಿರಾತಾರ್ಜುನೀಯ'ದ ನಾಯಕ

'ಕಿರಾತಾರ್ಜುನೀಯ'ದಲ್ಲಿ, ಹೆಸರೇ ಹೇಳುವ ಹಾಗೆ, ಅರ್ಜುನ ನಾಯಕ. ಆದರೂ ಕೃತಿಯೊಳಗಿನ ಹದಿನೆಂಟು ಸರ್ಗಗಳನ್ನೂ ನೋಡಿದರೆ, ಅರ್ಜುನನ ನಾಯಕತ್ವ ಪ್ರಸ್ಫುಟವಾಗಿರುವುದು ಕೊನೆಯ ಎಂಟು ಸರ್ಗಗಳಲ್ಲಿ. ಅದಕ್ಕೆ ಮೊದಲಿನ ಏಳು ಸರ್ಗಗಳಲ್ಲಿ ಅರ್ಜುನನ ಪ್ರಸ್ತಾಪವೇ ಪ್ರಧಾನವಾದರೂ, ಅಲ್ಲಿ ಕವಿಯ ವರ್ಣನಾಚಾತುರ್ಯಕ್ಕೆ ಹೆಚ್ಚು ಪ್ರಾಮುಖ್ಯ ದೊರಕಿದೆ. ಆರಂಭದ ಮೂರು ಸರ್ಗಗಳ ಕೊನೆಕೊನೆಗೆ ಅರ್ಜುನನ ನಾಯಕತ್ವ ನಿರ್ದಿಷ್ಟವಾಗುವು ದಾದರೂ ಈ ಮೂರು ಸರ್ಗಗಳಿಗೆ ನಾಯಕನಾದವನು ಧರ್ಮರಾಜನೇ. ಕ್ಷಮಾಗುಣ, ಎಂದರೆ ಇತರರಿಂದ ಆದ ಅಪರಾಧಗಳನ್ನು ಸಹಿಸಿಕೊಂಡು, ಅಕಾಲದಲ್ಲಿ ಕ್ರೋಧವನ್ನು ಎತ್ತಿಕೊಳ್ಳದಿರುವ ಚಿತ್ತಸ್ಥೈರ್ಯ, ಮೂರ್ತಿಮತ್ತಾಗಿ ಬಂದಹಾಗಿರುವ ಧರ್ಮರಾಯನ ಉದಾತ್ತವಾದ ಚಿತ್ರವನ್ನು 'ಕಿರಾತಾರ್ಜು ನೀಯ'ದ ಮೊದಲಿನ ಮೂರು ಸರ್ಗಗಳಲ್ಲಿ ಭಾರವಿ ನಮಗೆ ಕೊಟ್ಟಿದ್ದಾನೆ. ಆತನ ದೃಷ್ಟಿಯಲ್ಲಿ ಸಮಗ್ರಕೃತಿಗೆ ಅರ್ಜುನನೇ ನಾಯಕ; ನಮ್ಮ ಗಣನೆಯಲ್ಲಿ ಮೊದಲಿನ ಮೂರು ಸರ್ಗಗಳಿಗೆ ಕ್ಷಮಾಮೂರ್ತಿಯಾದ ಧರ್ಮರಾಜನೇ ನಾಯಕ.

## ಮೊದಲಿನ ಮೂರು ಸರ್ಗಗಳ ಪಾತ್ರಪರಂಪರೆ

ಮೊದಲಿನ ಮೂರು ಸರ್ಗಗಳಲ್ಲಿ ತುಂಬಿ ಬಂದಿರುವ ಪಾತ್ರಬಾಹುಳ್ಯ ವಾಗಲಿ ಪಾತ್ರವೈವಿಧ್ಯವಾಗಲಿ ಅನಂತರದ ಸರ್ಗಗಳಲ್ಲಿ ಇಲ್ಲ. ಇಲ್ಲಿನ ಹಲ ವಾರು ಪಾತ್ರಗಳಲ್ಲಿ ತಾರತಮ್ಯವನ್ನು ಹುಡುಕುವುದು ಕಷ್ಟವಾದ ಕೆಲಸ. ಕೃತ ಕೃತ್ಯನಾಗಿ ಬಂದ ಕಿರಾತದೂತ, ತಮ್ಮಂದಿರ ಮಂತ್ರಾಲೋಚನೆಗೆ ಬೆಲೆಕೊಟ್ಟ ಧರ್ಮರಾಜ, ಅಭಿಮಾನಹಾನಿಯನ್ನು ಮರೆಯಲಾರದ ದ್ರೌಪದಿ, ದ್ರೌಪದಿಯ ಮೂದಲೆಗಳನ್ನೂ ಆಕ್ಷೇಪಣೆಗಳನ್ನೂ ಮೌನವಾಗಿ ಸಹಿಸಿದ ಧರ್ಮರಾಜ, ಅಣ್ಣನ ದೃಷ್ಟಿಯನ್ನು ಅರ್ಥಮಾಡಿಕೊಳ್ಳಲಾರದೆ ಅಗ್ನಿಪುತ್ರಿಯ ಮಾತಿನ ಬೆಂಕಿಗೆ ತನ್ನ ಗಾಳಿಯನ್ನು ಬೀಸಿದ ಬಾಹುಶಾಲಿ ವಾಯುಪುತ್ರ, ಭೀಮನ ಶಾಸ್ತ್ರಾರ್ಥವನ್ನು ಸಯುಕ್ತಿಕವಾಗಿ ಖಂಡಿಸಿದ ರಾಜ್ಯಶಾಸ್ತ್ರಜ್ಞ ಧರ್ಮರಾಜ, ಧರ್ಮರಾಜನ ವಿಚಾರಪ್ರಸ್ಥಾನಕ್ಕೆ ಪುಷ್ಟಿಕೊಟ್ಟು ಪಾಂಡವರನ್ನು ಅನುಗ್ರಹಿ ಸಲು ಬಂದ ಶಾಂತಿಸ್ವರೂಪನಾದ ವ್ಯಾಸ, ವ್ಯಾಸರ ಆಜ್ಞೆಗೆ ವಿಧೇಯನಾಗಿ

ವರ್ತಿಸಲು ಸಮ್ಮತಿಸಿದ ವಿನಯಶಾಲಿ ಅರ್ಜುನ, ಅರ್ಜುನನಿಗೆ ಪ್ರಿಯವಾಕ್ಯಗಳ ಬುತ್ತಿಯನ್ನು ಕಟ್ಟಿಕೊಟ್ಟು ಕಳಿಸಿದ ದ್ರೌಪದಿ—ಇವರೆಲ್ಲರೂ ಒಬ್ಬರಾದ ಮೇಲೆ ಒಬ್ಬರು ನಮ್ಮ ಮನಸ್ಸಿನ ಕಣ್ಣಮುಂದೆ ಬಂದು ಅಚ್ಚು ಒತ್ತಿ ಹೋಗುತ್ತಾರೆ. ಅವರ ಆಗಮನ ನಿರ್ಗಮನಗಳು ಕಣ್ಣಿಗೆ ಕಟ್ಟಿದಂತೆ ಇದ್ದರೆ, ಅವರು ಪ್ರತಿಯೊಬ್ಬರ ಮಾತೂ ಘಂಟಾಘೋಷದಂತೆ ಕಿವಿಯಲ್ಲಿ ಅನುರಣನವಾಗುತ್ತಿರುತ್ತದೆ. ಇದರಿಂದ ಈ ಶ್ರವ್ಯಕಾವ್ಯದಲ್ಲಿ ದೃಶ್ಯಕಾವ್ಯದ ಗುಣ ಕಂಡುಬರುತ್ತದೆ.

## ಇದರೊಳಗಿನ ಸೂಕ್ತಿಗಳು

ಮೊದಲಿನ ಮೂರು ಸರ್ಗದಲ್ಲಿರುವ ಕಥೆ ಕೊಂಚ. ಆದರೆ ಆ ಕೊಂಚ ಕಥೆಗೆ ಸಂಬಂಧಿಸಿದವರ ಸಂಖ್ಯೆ ಕೊಂಚವಲ್ಲ, ಅವರ ಮನೋವ್ಯಾಪಾರಗಳು ಸಣ್ಣವಲ್ಲ, ಅವರು ಆಡುವ ಮಾತುಗಳು ಲಘುವಾದವಲ್ಲ. ಕಿರಾತನಿಂದ ಹಿಡಿದು ವ್ಯಾಸಮುನಿಯ ವರೆಗೆ, ಅವರೆಲ್ಲರನ್ನೂ ಆಡಿಸುವ ಭಾರವಿಯನ್ನೂ ಕೂಡಿಸಿಕೊಂಡು, ಎಲ್ಲರ ಮಾತುಗಳೂ ಅರ್ಥಗೌರವವುಳ್ಳವೇ. ಇಂತಹ ಮಾತುಗಳು ಸರ್ಗದ ಉದ್ದಕ್ಕೂ ಅವರಿವರ ಬಾಯಿಂದ ಬರುತ್ತಲೆ ಇರುತ್ತವೆ. ಆದರೆ ಎಲ್ಲ ಸೂಕ್ತಿಗಳಿಗಿಂತ ಮೇಲಾದ ಸೂಕ್ತಿ 'ಸಹಸಾ ವಿದಧೀತ ನ ಕ್ರಿಯಾಂ' ಎಂಬುದು. ದುಡುಕುವುದು ದೊಡ್ಡತನವಲ್ಲ, ತಾಳಿದವನು ಬಾಳಿಯಾನು, ಆತುರಗಾರನಿಗೆ ಬುದ್ಧಿ ಮಟ್ಟು, ಕೋಪವೆಂಬುದನರ್ಥಸಾಧನ ಮೊದಲಾಗಿ ಲೋಕಪ್ರಸಿದ್ಧವಾಗಿರುವ ನೀತಿ ಈ ಮೂರು ಸರ್ಗಗಳಲ್ಲಿ ಧರ್ಮರಾಜನಿಂದ ಪ್ರತಿಪಾದಿತವಾಗಿದೆ; ಅದೇ ವ್ಯಾಸಮುನಿಯಿಂದ ಅನುಮೋದಿಸಲ್ಪಟ್ಟಿದೆ. 'ಕ್ಷಮಾ ವೀರಸ್ಯ ಲಕ್ಷಣಂ'—ಕ್ಷಮೆಯೇ ವೀರನ ಲಕ್ಷಣ ಎಂಬುದನ್ನು ಧರ್ಮರಾಜನ ದೃಷ್ಟಾಂತದಿಂದ ಈ ಮೂರು ಸರ್ಗಗಳು ವಿಶದಪಡಿಸುತ್ತವೆ.

ಇಷ್ಟೆಲ್ಲ ಗುಣಗಳಿಂದ ತುಂಬಿರುವ ಈ ಮೂರು ಸರ್ಗಗಳು ಹದಿನೆಂಟು ಸರ್ಗಗಳ ಮಹಾಕಾವ್ಯದ ಅಂಶವಾದರೂ, ತನ್ನಷ್ಟಕ್ಕೆ ತಾನು ಸ್ವತಂತ್ರವಾಗಿ ನಿಂತು, ಸಾರ್ವಕಾಲಿಕವಾದ ಪರಮನೀತಿಯನ್ನು ಬೋಧಿಸಲು ಸಮರ್ಥವಾಗಿರುವ ಕಾರಣ, ಈ 'ಜ್ಞಾಪಕರೂಪ'ವನ್ನು ಸಿದ್ಧಪಡಿಸಿರುವುದಾಗಿದೆ. ಇದರಿಂದ ಸಹೃದಯರಿಗೆ ಸವಿಯೊದಗಲಿ.

೧೭-೩-೧೯೫೮
ಸೆಂಟ್ರಲ್‌ಕಾಲೇಜ್

ಜಿ. ಪಿ. ರಾಜರತ್ನಂ

## ಮೇಲೆ ಎರಡು ಮಾತು

ಪಂಪಕವಿಯ 'ವಿಕ್ರಮಾರ್ಜುನ ವಿಜಯ'ದೊಳಗಿನ ಕಿರಾತಾರ್ಜುನೀಯ ಪ್ರಕರಣವನ್ನು ಓದುವವರು ಕುಮಾರ ವ್ಯಾಸನ 'ಗದುಗಿನ ಭಾರತ'ದೊಳಗಿನ ಅದೇ ಪ್ರಕರಣವನ್ನೂ ಷಡಕ್ಷರಿಯ 'ಶಬರಶಂಕರವಿಳಾಸ'ವನ್ನೂ ಓದಬಹುದು. ವಸ್ತು ಒಂದೇ ಆದರೂ ಮೂರರ ಸೊಗಸು ಮೂರು ರೀತಿಯಾದದ್ದು.

ಈ ಪುಸ್ತಕದಲ್ಲಿ ಪದ್ಯಗಳಿಗೆ ವಿವರಣೆ ಬರೆಯುವಾಗ 'ದುರ್ಯೋಧನ' ಎಂಬ ಪರಿಚಿತವಾದ ಹೆಸರನ್ನೇ ಬಳಸಲಾಗಿದೆ. ಆದರೆ ಭಾರವಿಯ ಕೃತಿಯಲ್ಲಿ ಕಿರಾತದೂತನೂ ವ್ಯಾಸನೂ ಆತನನ್ನು 'ಸುಯೋಧನ' ಎಂದು ನಿರ್ದೇಶನ ಮಾಡುತ್ತಾರೆ. ದ್ರೌಪದಿಯೂ ಪಾಂಡವರೂ ಆತನ ಹೆಸರೆತ್ತುವುದಿಲ್ಲ. ಅವರ ಪಾಲಿಗೆ ಆತ ಕ್ವಚಿತ್ತಾಗಿ 'ಧೃತರಾಷ್ಟ್ರನ ಮಗ', ಅದಕ್ಕಿಂತ ಹೆಚ್ಚಾಗಿ 'ಶತ್ರು'.

ಸರ್ಗ ೧, ಪದ್ಯ ೨೪: ಜಯದ್ರಥನ ಭಂಗ, ಚಿತ್ರಾಂಗದನ ಸೆರೆಯಿಂದ ದುರ್ಯೋಧನನ ಬಿಡುಗಡೆ—ಇವು ವ್ಯಾಸ ಭಾರತದಲ್ಲಿ ಅರ್ಜುನನು ಪಾಶುಪತ ವನ್ನು ಪಡೆದ ಮೇಲೆ ನಡೆದುವೆಂದಿರುವುದಾದರೂ, ಪಂಪಭಾರತದ ಪ್ರಕಾರ ಇವು ಪಾಶುಪತ ಪ್ರಸಂಗಕ್ಕೆ ಮೊದಲೇ ನಡೆಯುತ್ತವೆ.

ಸರ್ಗ ೨, ಪದ್ಯ ೬: ಆನ್ವೀಕ್ಷಿಕೀ ಎಂಬುದು ನ್ಯಾಯಶಾಸ್ತ್ರ ಮತ್ತು ಆತ್ಮ ವಿದ್ಯೆ; ತ್ರಯೀ ಎಂಬುದು ಋಗ್ಯಜುಸ್ಸಾಮಗಳೆಂಬ ಮೂರು ವೇದಗಳು; ವಾರ್ತಾ ಎಂಬುದು ಅರ್ಥಶಾಸ್ತ್ರ; ದಂಡನೀತಿ ಎಂಬುದು ರಾಜ್ಯಶಾಸ್ತ್ರ. ಈ ನಾಲ್ಕರಲ್ಲೂ ಪಂಡಿತನಾದವನಿಗೆ ತಾರತಮ್ಯಜ್ಞಾನವೆಂಬ ವಿವೇಕ ಚೆನ್ನಾಗಿ ಇರುತ್ತದೆ.

# 'ಕಿರಾತಾರ್ಜುನೀಯಂ'— ಜ್ಞಾಪಕರೂಪ

**'ಕಿರಾತಾರ್ಜುನೀಯ'**—ಕಿರಾತನಿಗೂ ಅರ್ಜುನನಿಗೂ ಸಂಬಂಧ ಪಟ್ಟದ್ದು. (ಮತಕ್ಕೆ ಸಂಬಂಧಿಸಿದ್ದು 'ಮತೀಯ', ದೇಶಕ್ಕೆ ಸಂಬಂಧಿಸಿದ್ದು 'ದೇಶೀಯ' ಆದ ಹಾಗೆ.) ಇಂದ್ರನಿಂದಲೂ ಈಶ್ವರನಿಂದಲೂ ದಿವ್ಯಾಸ್ತ್ರಗಳನ್ನು ಪಡೆದುಕೊಂಡು ಬರುವುದಕ್ಕೋಸ್ಕರ ಅರ್ಜುನನು ಇಂದ್ರಕೀಲ ಪರ್ವತಕ್ಕೆ ಹೋಗಿ ತಪಸ್ಸುಮಾಡಿದ ಕಾಲದಲ್ಲಿ, ಕಿರಾತವೇಷದಿಂದ ಅಲ್ಲಿಗೆ ಬಂದ ಈಶ್ವರನಿಗೂ ಅರ್ಜುನನಿಗೂ ನಡೆದ ಕಾಳಗದ ಕಥೆಯನ್ನು ವರ್ಣಿಸುವ ಮಹಾಕಾವ್ಯ— 'ಕಿರಾತಾರ್ಜುನೀಯ.'

ಇದನ್ನು ಸಂಸ್ಕೃತದಲ್ಲಿ ಬರೆದವನು—**ಭಾರವಿ.** ಅದನ್ನು ಕನ್ನಡಿಸಿಕೊಟ್ಟಿರುವವರು ಡಾಕ್ಟರ್ **ಕೆ. ಕೃಷ್ಣಮೂರ್ತಿ.** ಮೂಲದಲ್ಲಿ ಹದಿನೆಂಟು ಸರ್ಗಗಳುಂಟು. ಈ ಕನ್ನಡ ಅನುವಾದದಲ್ಲಿ ಇರುವುದು ಮೊದಲಿನ ಆರು ಸರ್ಗಗಳು ಮಾತ್ರ.

'ಕನ್ನಡ ಕಿರಾತಾರ್ಜುನೀಯ' ಈಗ ಸದ್ಯಕ್ಕೆ ಪಠ್ಯಪುಸ್ತಕವಾಗಿದೆ ಎಂಬ ವಿಷಯ ನಮಗೆ ಪ್ರಾಸಂಗಿಕ, ಆದ್ದರಿಂದ ಗೌಣ. ಸಾರ್ವಜನಿಕರು ಸರ್ವ ಕಾಲಕ್ಕೂ ಎತ್ತಿಕೊಂಡು ವಿಚಾರಮಾಡತಕ್ಕುವಾದ ಕೆಲವು ಮೂಲ ಸತ್ಯಗಳ ಪರಿಶೀಲನೆಯನ್ನು ಮಹಾಭಾರತದಿಂದ ಆರಿಸಿಕೊಂಡು, ಅದನ್ನು ತನ್ನದೇ ಆದ ವಿಶಿಷ್ಟ ರೀತಿಯಲ್ಲಿ, ಮೂಲಕ್ಕೆ ವಿರೋಧವಾಗದ ಹಾಗೆ, ಅಲ್ಲಿರುವುದನ್ನು ಸ್ಪಷ್ಟಪಡಿಸಿ ಪುಷ್ಟಿಗೊಳಿಸುವ ಹಾಗೆ, ಭಾರವಿಯ ಕಿರಾತಾರ್ಜುನೀಯ ಪ್ರತಿಪಾದಿಸುತ್ತದೆ ಎಂಬುದೇ ನಮಗೆ ಇಲ್ಲಿ ಪ್ರಧಾನ.

ಭಾರವಿಯ ಅರ್ಥಭಾರವನ್ನು ಸ್ವಂತವಾಗಿ ನಿರ್ವಹಿಸಲು ಶ್ರಮವಾಗುತ್ತದೆ ಎಂಬುದು ನಿಜ. ಆ ಶ್ರಮವನ್ನು ಆದಷ್ಟು ಮಟ್ಟಿಗೆ ಕಡಮೆ ಮಾಡಿ, ಭಾರವನ್ನು ಹೊತ್ತರೂ, ಹೊತ್ತದ್ದು ಭಾರವೆಂಬ ಭಾವನೆಯೇ ಹೊರೆಯಾಗದ ಹಾಗೆ, ಈ 'ಜ್ಞಾಪಕರೂಪ' ನೆರವಾಗಬಹುದೆಂದು ಬರೆದವನ ನಂಬಿಕೆ.

**ಕರ್ಣಾಟಕ ಸಂಘ, ಸೆಂಟ್ರಲ್ ಕಾಲೇಜ್, ಬೆಂಗಳೂರು**

೧೮-೧೧-೫೭

## ಮೊದಲನೆಯ ಸರ್ಗ

೧. "ಕುರುರಾಯನು ತಾನು ಅನ್ಯಾಯದಿಂದ ಜೂಜಿನಲ್ಲಿ ಪಡೆದ ನಮ್ಮ ರಾಜ್ಯವನ್ನು ದಕ್ಕಿಸಿಕೊಳ್ಳಲು ಅನುಸರಿಸುತ್ತಿರುವ ನೀತಿ ರೀತಿಗಳಾವುವು? ಹಸ್ತಿನಾಪುರದ ಜನರ ನಡುವೆ ಗುಟ್ಟಾಗಿ ಓಡಿಯಾಡಿ, ತಿಳಿದುಕೊಂಡು ಬಾ" ಎಂದು ಧರ್ಮರಾಜನು ದ್ವೈತವನದಿಂದ ಒಬ್ಬ ಬೇಡನನ್ನು ಕಳಿಸಿದ್ದನು. ಅವನು ಬ್ರಹ್ಮಚಾರಿಯ ವೇಷದಿಂದ ಹೋಗಿ, ಎಲ್ಲ ವಿಚಾರಗಳನ್ನೂ ನೋಡಿ ಕೇಳಿ ತಿಳಿದು, ಧರ್ಮರಾಜನನ್ನು ಹುಡುಕಿಕೊಂಡು ಬಂದು ಕಂಡನು. ಧರ್ಮ ರಾಜನು ದ್ವೈತವನದಲ್ಲಿ ಒಂದೇ ಕಡೆ ಬೀಡು ಬಿಟ್ಟಿರಲಿಲ್ಲ; ಸ್ಥಳದಿಂದ ಸ್ಥಳಕ್ಕೆ ಬದಲಾಯಿಸುತ್ತಿದ್ದನು. ಆದ್ದರಿಂದಲೇ ದೂತ ಅವನನ್ನು ಅರಸಬೇಕಾಯಿತು.

೨. ಧರ್ಮರಾಜನು ತಾತ್ಕಾಲಿಕವಾಗಿ ರಾಜ್ಯವನ್ನು ಕಳೆದುಕೊಂಡಿದ್ದರೂ, ಅವನು ರಾಜನೇ ಎಂಬುದನ್ನು ದೂತ ಮರೆಯಲಿಲ್ಲ. ವಿನಯದಿಂದ ಕೈ ಮುಗಿದು "ನಿಮ್ಮ ಶತ್ರುವು ನಿಮ್ಮ ರಾಜ್ಯದ ಪ್ರಜೆಗಳನ್ನೆಲ್ಲ ತಾನು ಒಲಿಸಿ ವಶ ಪಡಿಸಿಕೊಂಡಿದ್ದಾನೆ" ಎಂದನು. ಇಂತಹ ಅಪ್ರಿಯವಾದ ಮಾತನ್ನಾಡು ವಾಗಲೂ, ಕೇಳುವವರ ಮನಸ್ಸಿಗೆ ನೋವಾಗದ ರೀತಿಯಲ್ಲಿ ಆ ದೂತ, ಸತ್ಯ ವನ್ನು ಸಹ್ಯವಾಗುವ ಹಾಗೆ ಹೇಳಿದ. 'ಅರಸನಿಗೆ ಹಿತವಾಗಬೇಕಾದರೆ, ಇದ್ದು ದನ್ನು ಇದ್ದಂತೆಯೇ, ಅದು ಅಪ್ರಿಯವಾದರೂ, ಹೇಳಬೇಕು. ಪ್ರಿಯವಾಗು ತ್ತದೆ ಎಂಬ ಕಾರಣದಿಂದ ಸುಳ್ಳನ್ನು ಹೇಳಬಾರದು. ಹೇಳುವ ಸತ್ಯ ಅಪ್ರಿಯ ವಾಗಿರಬಹುದಾದರೂ, ಹೇಳುವ ರೀತಿಯಿಂದ ಅದರ ಅಪ್ರಿಯತೆಯನ್ನು ಆದಷ್ಟು ಮಟ್ಟಿಗೆ ಕಡಮೆಮಾಡಬಹುದು' ಎಂಬುದನ್ನು ಆ ದೂತನ ಮನಸ್ಸು ತಿಳಿದಿತ್ತು.

೩. ದೊರೆಯಾದ ಧರ್ಮರಾಜನು ಶತ್ರುಗಳನ್ನು ನಾಶಮಾಡಬೇಕೆಂದು ಮನಸ್ಸು ಮಾಡಿದ್ದನು. ಆದರೆ ದುರ್ಯೋಧನನಂಥವನನ್ನು ಸೋಲಿಸುವುದು ಸಣ್ಣ ಕೆಲಸವಲ್ಲ, ದೊಡ್ಡ ಕಾರ್ಯ—ಎಂಬುದೂ ಅವನಿಗೆ ಗೊತ್ತಿತ್ತು. ರಾಜ ಕಾರ್ಯಗಳನ್ನು ರಹಸ್ಯವಾಗಿ ನಡಸುವುದು ನೀತಿ. ಆದ್ದರಿಂದ ದೂತನನ್ನು ಏಕಾಂತವಾಗಿ ಕರೆದು, "ಏನೇನು ನೋಡಿ ಕೇಳಿ ತಿಳಿದು ಬಂದೆಯೋ ಅದನ್ನೆಲ್ಲ ಹೇಳು" ಎಂದು ಆಜ್ಞೆ ಮಾಡಿದನು. ದೂತನು ಹೇಳಬೇಕಾದ್ದನ್ನು ಸ್ಪಷ್ಟವಾಗಿ, ಕಿವಿಗೆ ಇಂಪಾದ ಶಬ್ದಗಳನ್ನು ಆರಿಸಿ, ತುಂಬ ದೊಡ್ಡ ಅರ್ಥಗಳನ್ನಿಟ್ಟು,

ರಾಜ್ಯಶಾಸ್ತ್ರದ ಸಾರಸಂಪತ್ತುಗಳಿಂದ ತುಂಬಿ ತುಳುಕುತ್ತಿದ್ದ ಉಜ್ವಲವಾದ ಮಾತುಗಳನ್ನು ಈ ಪ್ರಕಾರವಾಗಿ ಆಡಿದನು:

೪. "ದೂತರುಗಳಾದ ನಾವು ನಮ್ಮ ದೊರೆಗಳಿಗೆ ಕಣ್ಣುಗಳು ಇದ್ದ ಹಾಗೆ. ಅವರು ತಾವೇ ಕಾಣಬಹುದಾದ್ದನ್ನು ಅವರ ಪರವಾಗಿ ನಾವು ಕಂಡು ಬರಬೇಕು. ಅರಸರ ಉಪ್ಪನ್ನು ತಿಂದೆವೆಂಬ ಕೃತಜ್ಞತೆಯುಳ್ಳವರು ನಾವು ಅರಸರಿಗೆ ಇಲ್ಲದ್ದನ್ನು ಹೇಳಿ, ಇದ್ದದ್ದನ್ನು ಮರಸಿ, ಮೋಸಮಾಡುವುದು ತಕ್ಕದ್ದಲ್ಲ. ನಾವು ಕಂಡು ಕೇಳಿದ ಸತ್ಯ ತಮಗೆ ಪ್ರಿಯವಾಗಲಿ ಅಥವಾ ಅಪ್ರಿಯವಾಗಲಿ, ಏನೇ ಆದರೂ ಅದಕ್ಕೆ ತಾವು ಕಿವಿಗೊಟ್ಟು, ನಮ್ಮನ್ನು ಮನ್ನಿಸಬೇಕು. ಏಕೆಂದರೆ, ಹಿತವಾಗಬೇಕೆಂದು ಹೇಳಿದಂತಹ ಮಾತು ಕಿವಿಗೆ ಪ್ರಿಯವೂ ಆಗುವುದು ಬಹಳ ವಿರಳ.

೫. ಯಾವುದರಿಂದ ತನ್ನ ಒಡೆಯನಿಗೆ ಶ್ರೇಯಸ್ಸು ಉಂಟಾಗುವುದೋ ಅಂತಹ ಮಾತನ್ನು—ಅದು ಅಪ್ರಿಯವಾದೀತೆಂಬ ಭಯದಿಂದ—ಹೇಳದೆ ಇದ್ದ ಮಂತ್ರಿ ತನ್ನ ಕರ್ತವ್ಯಗಳನ್ನು ತಿಳಿಯದ ಅಯೋಗ್ಯ. ಯಾವ ಮಾತನ್ನು ಕೇಳಿದರೆ, ತನ್ನ ಹಿತಸಾಧನೆಯಾಗುತ್ತದೋ ಅಂತಹದನ್ನು ಹಿತೈಷಿಗಳು ಹೇಳುವಾಗ—ಅದು ಅಪ್ರಿಯವಾದೀತೆಂಬ ಕಾರಣದಿಂದ—ಯಾವನು ಅದಕ್ಕೆ ಕಿವಿಕೊಡುವುದಿಲ್ಲವೋ, ಅಂತಹ ರಾಜ, ರಾಜನಾಗಲು ಅರ್ಹನಲ್ಲ. ಅದು ಬಿಟ್ಟು, ಹಿತ ಶ್ರೇಯಸ್ಸುಗಳನ್ನು ಮಾತ್ರ ಗುರಿಯಲ್ಲಿಟ್ಟು; ಹಿತವೋ, ಅಹಿತವೋ, ಹೇಳಬೇಕಾದ್ದನ್ನೆಲ್ಲ ಮಂತ್ರಿ ಹೇಳಿ; ಹಿತವೋ, ಅಹಿತವೋ, ಕೇಳಬೇಕಾದ್ದನ್ನೆಲ್ಲ ದೊರೆ ಕೇಳಿ; ಎಲ್ಲಿ ಹೀಗೆ ರಾಜಮಂತ್ರಿಗಳು ಅನ್ಯೋನ್ಯವಾಗಿ ಹೊಂದಿ ನಡೆಯುವರೋ ಆ ರಾಜ್ಯದಲ್ಲಿ ಸರ್ವಸಂಪತ್ತುಗಳೂ ಬಂದು ಸೇರಿಕೊಂಡು ಇರುತ್ತವೆ.

೬. ಆದರೆ ನಾನು ಮಂತ್ರಿಯಲ್ಲ, ಅಷ್ಟು ಬುದ್ಧಿವಂತನಲ್ಲ. ನಾನೊಬ್ಬ ಮಂದಮತಿಯಾದ ಸಣ್ಣ ಮನುಷ್ಯ. ರಾಜರುಗಳ ವರ್ತನೆಯೆಂಬುದನ್ನು ಒಳಹೊಕ್ಕು ನೋಡುವುದು ಬಹಳ ಕಷ್ಟ. ಆದರೂ ಸಮರ್ಥರಾದ ಶತ್ರುಗಳ ರಹಸ್ಯವಾದ ನೀತಿಗಳನ್ನೆಲ್ಲ ನಾನು ಭೇದಿಸಿ ತಿಳಿದು ಬಂದಿದ್ದೇನೆ. ಈ ಕೃತಕೃತ್ಯತೆಗೆ ನನ್ನ ಸ್ವಲ್ಪ ಸಾಮರ್ಥ್ಯ ಕಾರಣವಲ್ಲ. ಪ್ರಭುಗಳಾದ ತಮ್ಮ ಪಾದಗಳ ಮಹಿಮೆಯೇ ಕಾರಣ—ನಾನು ಅಲ್ಲಿನ ಗುಟ್ಟನ್ನು ತಿಳಿದು ಬಂದುದಕ್ಕೆ.

೭. ದುರ್ಯೋಧನನೇನೋ ನಿಮ್ಮ ಸಿಂಹಾಸನವನ್ನು ಕಸಿದುಕೊಂಡು, ತಾನು ಅದರ ಮೇಲೆ ಕುಳಿತಿದ್ದಾನೆ. ನೀವಾದರೂ ರಾಜ್ಯವನ್ನು ಕಳೆದುಕೊಂಡು ಕಾಡಿನಲ್ಲಿದ್ದೀರಿ. ಆದರೂ, ಎಂದಾದರೂ ನಿಮ್ಮಿಂದ ತನಗೆ ಸೋಲು-ಒದಗಿದರೂ ಒದಗಬಹುದೆಂದು ಅವನ ಮನಸ್ಸು ಹೆದರುತ್ತಿದೆ. ಅದಕ್ಕೋಸ್ಕರವಾಗಿ, ತಾನು ಅಂದು ಮೋಸದಿಂದ ಜೂಜಿನಲ್ಲಿ ಗೆದ್ದ ರಾಜ್ಯವನ್ನು ಇಂದು ರಾಜನೀತಿಯಿಂದ ಗೆದ್ದು ನಿಲ್ಲಿಸಿಕೊಳ್ಳುತ್ತೇನೆ ಎಂದು ಮನಸ್ಸು ಮಾಡಿದ್ದಾನೆ. ಅದಕ್ಕಾಗಿ, ವಿಧವಿಧವಾದ ವರ್ತನೆಗಳಿಂದ ಪ್ರಜೆಗಳನ್ನು ಒಲಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾನೆ.

೮. ದುರ್ಯೋಧನನಿಗೆ ನೇರವಾದ ನಡತೆ ತಿಳಿಯದು. ಅವನ ಮಾರ್ಗವೆಲ್ಲ ವಕ್ರ. ನಿಮ್ಮ ರಾಜ್ಯವನ್ನು ಗೆದ್ದದ್ದು ಮಾತ್ರವಲ್ಲ, ನಿಮ್ಮ ಪ್ರಜೆಗಳನ್ನೂ ವಶಪಡಿಸಿಕೊಳ್ಳುವುದಕ್ಕೋಸ್ಕರ ಅವನು ಎಷ್ಟು ಗುಣವಂತನಾಗಿ ನಡೆಯುತ್ತಿರುವನೆಂದರೆ—ಆ ಗುಣಗಳ ಅಭಿವೃದ್ಧಿಯಿಂದ ನಿರ್ದುಷ್ಟವಾದ ಯಶಸ್ಸನ್ನು ಪಡೆದು, ಯಶೋವಂತರಾದ ನಿಮ್ಮನ್ನೂ ಮೀರಿಸಲು ಪ್ರಯತ್ನಿಸುವಂತಿದೆ. ಅಷ್ಟು ಒಳ್ಳೆಯ ಹೆಸರನ್ನು ಸಂಪಾದಿಸುತ್ತಿದ್ದಾನೆ. 'ದುಷ್ಟರೊಡನೆ ಸ್ನೇಹ ಮಾಡುವುದಕ್ಕಿಂತ ಶಿಷ್ಟರೊಡನೆ ದ್ವೇಷ ಮಾಡುವುದೆ ಮೇಲು' ಎಂಬ ಸಾಮತಿ ಇಲ್ಲಿ ಸತ್ಯವಾಯಿತು. ಏಕೆಂದರೆ, ಈ ದ್ವೇಷದಿಂದ, ಅವರನ್ನು ಮೀರಿಸಬೇಕೆಂಬ ಸ್ಪರ್ಧಾ ಬುದ್ಧಿಯಿಂದ ಒಳ್ಳೆಯದೇ ಸಂಭವಿಸುತ್ತದೆ, ಸಕಲ ಸಂಪತ್ತುಗಳೂ ಕೈವಶವಾಗುತ್ತವೆ.

೯. ಪ್ರಜೆಗಳನ್ನು ಕಾಪಾಡುವ ಕಾರ್ಯ ಕಷ್ಟವಾದ ಕಾರ್ಯ. ದುರ್ಯೋಧನನು ಈ ಕಷ್ಟವಾದ ಕಾರ್ಯವನ್ನು ಮಾಡಿಯೇತೀರಬೇಕೆಂದು ದೃಢಸಂಕಲ್ಪ ಮಾಡಿದ್ದಾನೆ. ಆ ಸಂಕಲ್ಪವನ್ನು ನೆರವೇರಿಸುವ ಪ್ರಯತ್ನದಲ್ಲಿ ತನ್ನೊಳಗಿರುವ ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯಗಳೆಂಬ ಆರು ಶತ್ರುಗಳನ್ನು ಗೆದ್ದಿದ್ದಾನೆ. ರಾಜನೀತಿಯನ್ನು ಅರ್ಥಮಾಡಿಕೊಂಡು, ಅದರಂತೆ ಆಲಸ್ಯವಿಲ್ಲದೆ ಆಚರಿಸುತ್ತಿದ್ದಾನೆ. ಹಗಲಿನಲ್ಲಿ ಮಾಡಬೇಕಾದ್ದನ್ನು ಹಗಲಿನಲ್ಲಿಯೂ ರಾತ್ರಿ ಮಾಡಬೇಕಾದ್ದನ್ನು ರಾತ್ರಿಯಲ್ಲಿಯೂ ಮಾಡುತ್ತ, ಆಯಾ ಹೊತ್ತಿನ ಕರ್ತವ್ಯಗಳನ್ನು ಆಯಾ ಹೊತ್ತಿನಲ್ಲಿ ನಡಸುತ್ತ, ಯಾವಾಗಲೂ ಜಾಗೃತನಾಗಿ ಕಾರ್ಯತತ್ಪರನಾಗಿದ್ದಾನೆ.

೧೦. ತನ್ನನ್ನು ಹಿಂಬಾಲಿಸುವ ಸೇವಕರನ್ನು ತನ್ನ ಹತ್ತಿರದ ಸ್ನೇಹಿತ

ರೆಂಬಂತೆ ಕಾಣುತ್ತಿದ್ದಾನೆ. ಹತ್ತಿರದ ಸ್ನೇಹಿತರನ್ನು ಬಂಧುಗಳಿಗೆ ಸಮಾನವಾಗಿ ಕಂಡು ಮರ್ಯಾದೆಮಾಡುತ್ತಿದ್ದಾನೆ. ಬಂಧುವರ್ಗದವರಿಗೋ—ರಾಜ್ಯಕ್ಕೆ ಅವರೇ ಅಧಿಪತಿಗಳು ಎಂದೆನಿಸುವಂತೆ ನಡೆದುಕೊಳ್ಳುತ್ತಿದ್ದಾನೆ. ಹೀಗೆ, ದೂರದ ಜನರನ್ನು ಹತ್ತಿರ ಮಾಡಿಕೊಂಡು, ಹತ್ತಿರದವರನ್ನು ಆತ್ಮೀಯರನ್ನಾಗಿ ಮಾಡಿಕೊಂಡಿದ್ದಾನೆ. 'ನಾನು ಇವರಿಗೆಲ್ಲ ಆಶ್ರಯ ಕೊಡುತ್ತಿರುವ ರಾಜ' ಎಂಬ ಗರ್ವವನ್ನು ಅಡಗಿಸಿಕೊಂಡು, 'ನಿಮ್ಮಿಂದ ಈ ರಾಜ್ಯ, ನಿಮಗಾಗಿ ಈ ರಾಜ್ಯ, ನಾನು ನಿಮ್ಮ ವಶವರ್ತಿ' ಎಂದು ದೈನ್ಯವನ್ನು ತೋರಿಸುತ್ತಿದ್ದಾನೆ.

೧೧. ಇಷ್ಟಾರ್ಥಗಳು ಈಡೇರಬೇಕಾದರೆ, ಧರ್ಮ-ಅರ್ಥ-ಕಾಮಗಳೆಂಬ ಮೂರು ಗುಂಪುಗಳಿಗೂ ಅನ್ಯೋನ್ಯತೆ ಇರಬೇಕು. ಇವುಗಳಲ್ಲಿ ಯಾವುದೂ ತಾನು ಅತಿಯಾಗದೆ, ತನ್ನ ತನ್ನ ಮಿತಿಯಲ್ಲಿ ಸಮರಸತೆಯಿಂದ ಹೊಂದಿಕೊಂಡಿರಬೇಕು. ದುರ್ಯೋಧನನು ದುಷ್ಕರವಾದ ಇದನ್ನು ಸಾಧಿಸಿದ್ದಾನೆ. ಈ ತ್ರಿಗಣದಲ್ಲಿ ಯಾವುದನ್ನೂ ಅತಿಯಾಗಿ ಸೇವಿಸದೆ, ಎಲ್ಲಕ್ಕೂ ಒಂದೇ ರೀತಿಯಾಗಿ ವಿಶ್ವಾಸದಿಂದ ಗಮನಕೊಡುತ್ತಿದ್ದಾನೆ. ಅವನ ಈ ಗುಣಗಳಿಗೆ ಮನಃಪೂರ್ವಕವಾಗಿ ಮೆಚ್ಚಿ, ಧರ್ಮ ಅರ್ಥ ಕಾಮಗಳು ಎಲ್ಲವೂ ಮಾತನಾಡಿಕೊಂಡು, ಒಂದಾಗಿ, ಅವನಿಗೆ ಸಹಾಯಮಾಡುತ್ತಿರುವ ಹಾಗಿದೆ.

೧೨. ಅವನು ಆಡುವ ಮಾತೆಲ್ಲ ಒಳ್ಳೆಯ ಮಾತೇ, ಮನಸ್ಸನ್ನು ಕೊಳ್ಳುವ ಮಾತೇ. ಆದರೆ ಅದು ಬರಿಯ ಬಾಯುಪಚಾರವಲ್ಲ, ಮಾತಿನ ಜೊತೆಗೆ ತಕ್ಕ ದಾನವೂ ಉಂಟು. ದಾನವಾದರೂ ಸ್ವಲ್ಪವಾದದ್ದಲ್ಲ, ಹೆಚ್ಚಿನ ಪ್ರಮಾಣದ್ದು. ಅದೂ ಸತ್ಕಾರಪೂರ್ವಕವಾಗಿ ಕೊಟ್ಟದ್ದು. ಆ ಸತ್ಕಾರವಾದರೋ ಬರಿಯ ಔಪಚಾರಿಕವಾದದ್ದಲ್ಲ, ಎಷ್ಟೆಲ್ಲ ಸತ್ಕಾರಮಾಡಬಹುದೇ ಅಷ್ಟನ್ನೂ ಮಾಡುವಂಥದು. ಇಷ್ಟಾದರೂ ಅವನ ಮಾತಾಗಲಿ, ದಾನವಾಗಲಿ, ಸತ್ಕಾರವಾಗಲಿ, ಪಾತ್ರ ಅಪಾತ್ರಗಳೆಂಬ ತಾರತಮ್ಯ ವಿವೇಚನೆಯಿಲ್ಲದೆ ವಿನಿಯೋಗವಾಗುವುದಿಲ್ಲ.

೧೩. ರಾಜ್ಯದ ವಿಷಯದಲ್ಲಿ ದುರ್ಯೋಧನನು ತನ್ನ ಆಸೆಯನ್ನು ಸಂಪೂರ್ಣವಾಗಿ ಅಡಗಿಸಿಕೊಂಡಿದ್ದಾನೆ. ಯಾರದೋ ಮೇಲಿನ ಕೋಪದಿಂದ, ಯಾವುದೋ ಅಲ್ಪ ಕಾರಣಕ್ಕಾಗಿ, ಅವನು ರಾಜ್ಯಸಂಪತ್ತಿನಲ್ಲಿ ಆಸೆಯನ್ನು ತೊರೆದಿಲ್ಲ. 'ರಾಜನಾದವನಿಗೆ ರಾಜ್ಯದಲ್ಲಿ ಆಸೆಯಿರಬಾರದು, ರಾಜ್ಯವಿರುವುದು ಪ್ರಜೆಗಳಿಗೋಸ್ಕರ, ಅದು ರಾಜನ ಕೈಯಲ್ಲಿ ನ್ಯಾಸವಾಗಿರತಕ್ಕದ್ದು, ಇದೇ ರಾಜಧರ್ಮ'

ಎಂದು ನಂಬಿ ಅದರಂತೆ ನಡೆಯುತ್ತಿದ್ದಾನೆ. ರಾಜ್ಯದಲ್ಲಿ ಯಾರಾದರೂ ಧರ್ಮಕ್ಕೆ ವಿರೋಧವಾಗಿ ನಡೆದರೆ—ಅವನು ತನಗೆ ಶತ್ರುವಾಗಿರಲಿ, ಅಥವಾ ಸ್ವಂತ ಮಗನೇ ಆಗಿರಲಿ—ಅವರನ್ನು ನಿಷ್ಪಕ್ಷಪಾತವಾಗಿ, ಹಿರಿಯರು ಅಂಥ ಸಂದರ್ಭದಲ್ಲಿ ನಿಯಮಿಸಿರುವ ಶಿಕ್ಷೆಯಿಂದ, ಶಿಕ್ಷಿಸುವನು.

೧೪. ಅನ್ಯಾಯದಿಂದ ತಾನು ಸಂಪಾದಿಸಿದ ಸಿಂಹಾಸನವನ್ನು ಹಾಗೆಯೇ ಅನ್ಯಾಯದಿಂದ ಯಾರು ಅಪಹರಿಸುವರೋ ಎಂಬ ಭೀತಿ ಅವನಿಗೆ ಇನ್ನೂ ತಪ್ಪಿಲ್ಲ. ಆದರೂ ನಂಬಿಕೆಗೆ ಅರ್ಹರಾದ ಸೇವಕರನ್ನು ಎಲ್ಲ ಕಡೆಗೂ ಕಾವಲಿರಿಸಿ, ತನ್ನ ಭೀತಿಯನ್ನು ಹೊರಗೆ ತೋರಿಸಿಕೊಳ್ಳದೆ, ನಿರ್ಭೀತನಂತೆ ನಡೆಯುತ್ತ ಇದ್ದಾನೆ. ತನ್ನ ಕಾರ್ಯವನ್ನು ತನ್ನ ಸೇವಕರು ಸಮರ್ಪಕವಾಗಿ ನಡಸಿದ್ದನ್ನು ಕಂಡು, ಆ ಸೇವಕರಿಗೆ ಅವನು ಕೊಟ್ಟಿರುವ ಐಶ್ವರ್ಯವನ್ನು ಗಮನಿಸಿದರೆ, ಅವನನ್ನು 'ಕೃತವೇದಿ' ಎನ್ನಬಹುದು. ತಾನು ನಿಮಗೆ ಮಾಡಿರುವ ಅನ್ಯಾಯ ಎಷ್ಟು ಅಪಾರವಾದದ್ದು ಎಂಬುದನ್ನು ಚೆನ್ನಾಗಿ ತಿಳಿದಿದ್ದಾನೆ; ಹಾಗೆಯೇ ಆ ಅನ್ಯಾಯದ ಫಲವನ್ನು ದಕ್ಕಿಸಿಕೊಳ್ಳುವ ಪ್ರಯತ್ನದಲ್ಲಿ ತನ್ನ ಸೇವಕರಿಂದ ತನಗೆ ಎಷ್ಟು ಉಪಕಾರವಾಗುತ್ತಿದೆ ಎಂಬುದನ್ನೂ ಅವನು ಚೆನ್ನಾಗಿ ಬಲ್ಲನು.

೧೫. ಹಿಡಿದ ಕಾರ್ಯವು ಕೈಗೂಡಬೇಕಾದರೆ, ಸಾಮ-ದಾನ-ಭೇದ-ದಂಡ ಎಂಬ ನಾಲ್ಕು ನಯಗಳನ್ನು ಔಚಿತ್ಯವರಿತು ಬಳಸಬೇಕು. ಉಗುರಿನಲ್ಲಿ ಆಗುವ ಕೆಲಸವೇ ಬೇರೆ, ಕೊಡಲಿಯಿಂದಾಗುವ ಕೆಲಸವೇ ಬೇರೆ. ದುರ್ಯೋಧನನು ದೇಶ ಕಾಲ ಪಾತ್ರ ಪರಿಸ್ಥಿತಿಗಳನ್ನು ಕೂಲಂಕಷವಾಗಿ ಪರೀಕ್ಷಿಸಿ, ಅಲ್ಲಲ್ಲಿಗೆ ತಕ್ಕ ನಯವನ್ನು ಪ್ರಯೋಗಿಸುತ್ತಿದ್ದಾನೆ. ಈ ಗುಣ ಅವನಲ್ಲಿ ಎಡೆಬಿಡದೆ ಅತಿಶಯವಾಗಿ ಕಂಡುಬರುವುದರಿಂದ, ಆ ನಾಲ್ಕು ನಯಗಳೂ ಅವನಿಗೆ ಪ್ರಸನ್ನವಾಗಿ, ನಾನು ತಾನು ಎಂಬ ಸ್ಪರ್ಧೆಯಿಂದ ಅವನು ಇಷ್ಟಪಟ್ಟದ್ದನ್ನು ತಾವಾಗಿ ತಾವೇ ಈಡೇರಿಸಿಕೊಡುತ್ತಿವೆ.

೧೬. ಇದರಿಂದಾಗಿ ಅವನ ಮಿತ್ರವರ್ಗ ಬೆಳೆಯುತ್ತಿದೆ. ಅವನ ಸಭಾಭವನದ ಅಂಗಳದ ತುಂಬ ಯಾವಾಗಲೂ ಅನೇಕ ರಾಜರುಗಳ ಕುದುರೆ ಕಟ್ಟಿದ ತೇರುಗಳು ಕಿಕ್ಕಿರಿದಿರುತ್ತವೆ. ಆ ರಾಜರುಗಳು ಕಾಣಿಕೆಯಾಗಿ ತಂದುಕೊಟ್ಟ ಮದಗಜಗಳ ಮದಜಲದಿಂದ ಆ ಅಂಗಳದ ನೆಲ ಸದಾ ಒದ್ದೆಯಾಗಿ, ಏಳೆಲೆಬಾಳೆಯ ಸುವಾಸನೆಯನ್ನು ಬೀರುತ್ತಿರುತ್ತದೆ.

೧೭. ದುರ್ಯೋಧನನ ರಾಜ್ಯದಲ್ಲಿ ರೈತರು ಉಳಬೇಕಾದ್ದೇ ಇಲ್ಲ, ಅವರ ಗದ್ದೆಗಳಲ್ಲಿ ಬೆಳೆ ಅನಾಯಾಸವಾಗಿ ಬೆಳೆದುಬರುತ್ತದೆ. ಅಕಸ್ಮಾತ್ತಾಗಿ ಮಳೆ ಸಕಾಲಕ್ಕೆ ಬಾರದೆ ಏನಾದರೂ ತೊಂದರೆಯಾದರೆ, ದುರ್ಯೋಧನನು ಕಟ್ಟಿಸಿರುವ ಕೆರೆಗಳಿಂದಲೂ ತೋಡಿಸಿರುವ ಕಾಲುವೆಗಳಿಂದಲೂ ಆ ತೊಂದರೆ ಪರಿಹಾರ ವಾಗುತ್ತದೆ. ಹೀಗೆ ಪ್ರಜೆಗಳ ಹಿತವನ್ನು ರಕ್ಷಿಸುತ್ತಿರುವ ಆ ಕೌರವನ ಕಾರ್ಯ ತತ್ಪರತೆಯಿಂದ ಕುರುನಾಡು ಕಣ್ಣಿಗೆ ಹಬ್ಬವನ್ನುಂಟುಮಾಡುತ್ತಿದೆ.

೧೮. ಭೂಪಾಲನ ಈ ಗುಣಗಳಿಗೆ ಮನಸ್ಸು ಕರಗಿ, ಭೂಮಿ ತಾನಾಗಿಯೇ ಅನೇಕ ಬಗೆಯ ಐಶ್ವರ್ಯವನ್ನು ಕರುಣಿಸುತ್ತಿದ್ದಾಳೆ. ದುರ್ಯೋಧನನು ಗುಣ ಶಾಲಿಯಾಗಿ ಯಶಸ್ಸನ್ನು ಪಡೆದಿರುವುದರಿಂದ, ಪ್ರಜೆಗಳನ್ನು ದಯೆತೋರಿ ಪಾಲಿ ಸುವುದರಿಂದ, ಅಡ್ಡಿಗಳು ಯಾವುವೂ ಇಲ್ಲದಂತೆ ರಾಜ್ಯದ ಅಭಿವೃದ್ಧಿಗಾಗಿ ಆಳುವುದರಿಂದ, ಅವನು ಅಗ್ನಿಗೆ ಸಮಾನವಾದ ತೇಜಸ್ವಿಯಾಗಿದ್ದಾನೆ, ಕುಬೇರ ನಿಗೆ ಸಮನಾದ ಸಂಪದಧಿಕಾರಿಯಾಗಿದ್ದಾನೆ.

೧೯. ಈ ರಾಜನ ಬಳಿಯಿರುವ ವೀರರಾದರೂ ಎಂಥವರು! ಬಲಶಾಲಿ ಗಳಾದವರು, ತಮ್ಮ ಬಲದ ಅಳತೆ ತಿಳಿದವರು, ತಮ್ಮ ಬಲಕ್ಕೆ ಅನುರೂಪವಾದ ಐಶ್ವರ್ಯವನ್ನು ಅರಸನಿಂದ ಪ್ರತಿಫಲವಾಗಿ ಪಡೆದವರು. ಕೈಯಲ್ಲಿ ಸುಮ್ಮನೆ ಬಿಲ್ಲು ಅಲಂಕಾರಕ್ಕೆ ಹಿಡಿದವರಲ್ಲ, ಅದನ್ನು ಯುದ್ಧರಂಗದಲ್ಲಿ ಸಾರ್ಥಕವಾಗಿ ಉಪಯೋಗಿಸಿ ಯಶಸ್ಸು ಪಡೆದವರು. ಮರೆ ಮೋಸ ವಂಚನೆಗಳಿಲ್ಲದೆ, ತಮ್ಮ ತಮ್ಮಲ್ಲಿಯೆ ಈರ್ಷ್ಯೆಯಿಂದ ಒಡಕು ಉಂಟುಮಾಡಿಕೊಳ್ಳದೆ, ತಾವೆಲ್ಲರೂ ಒಂದಾಗಿ, ಅರಸನ ಹಿತವನ್ನು ರಕ್ಷಿಸುವುದಕ್ಕೋಸ್ಕರ ತಮ್ಮ ಪ್ರಾಣಗಳನ್ನಾದರೂ ತೆರಲು ಸಿದ್ಧರಾದವರು.

೨೦. ರಾಜ್ಯವನ್ನು ತಾನು ನೆಮ್ಮದಿಯಿಂದ ಬಾಳಿಸುವುದಕ್ಕೆ ಏನೇನು ಮಾಡಬೇಕೋ ಅದನ್ನೆಲ್ಲ ಮಾಡಿ, ಕೃತಕೃತ್ಯನಾಗಿದ್ದಾನೆ ದುರ್ಯೋಧನ. ಒಳ್ಳೆಯ ನಡತೆಯುಳ್ಳ, ತನ್ನ ನಂಬಿಕೆಗೆ ದ್ರೋಹಮಾಡದ, ಶತ್ರುಗಳ ಪ್ರಲೋ ಭನಗಳಿಗೆ ಒಳಗಾಗದ ಗೂಢಚಾರರಿಂದ ಇತರ ರಾಜರ ಕೃತ್ಯಗಳನ್ನು ಒಂದು ಚೂರೂ ಬಿಡದ ಹಾಗೆ ತಿಳಿದಿರುತ್ತಾನೆ. ತನ್ನನ್ನು ಮಾತ್ರ ಅವರು ತಿಳಿಯಲು ಅವಕಾಶ ಕೊಡುವುದಿಲ್ಲ. ಇದರಲ್ಲಿ ಅವನ ಬುದ್ಧಿಯು, ವಿಶ್ವವನ್ನು ಸೃಷ್ಟಿಸಿದ ವಿಧಿಯ ಬುದ್ಧಿಯನ್ನು ಹೋಲುತ್ತದೆ. ಅಮಿತವಾದ ಹಿತದಿಂದ ತುಂಬಿರುವ

ಆ ಕಾರ್ಯ ಮುಂದೆ ಬರುವ ಫಲದ ಚಿಹ್ನೆಗಳನ್ನು ಸೂಚಿಸುತ್ತವೆಯೆ ಹೊರತು, ಫಲ ಪೂರ್ತಿ ಬರುವ ವರೆಗೂ ಈ ಕೆಲಸ ಹೇಗೆ ನಡೆಯಿತು, ಏಕೆ ನಡೆಯಿತು ಎಂಬುದು ಅರ್ಥವಾಗುವುದಿಲ್ಲ.

೨೧. ದುರ್ಯೋಧನನು ತನ್ನ ಕಾರ್ಯವನ್ನು ತಾನೇ ಮಾಡದೆ, ತನ್ನವರಿಂದ ಆಗಮಾಡಿಸಿಕೊಳ್ಳುತ್ತಾನೆ. ಬಿಲ್ಲಿಗೆ ಹಗ್ಗವನ್ನು ಎತ್ತಿಕಟ್ಟಿ, ಬಾಣ ಹೂಡಿಲ್ಲ ಅವನು. ಯಾರ ವಿಷಯದಲ್ಲಿಯೂ ಕೋಪದಿಂದ ಮುಖವನ್ನು ಅವನು ಗಂಟು ಹಾಕಿಲ್ಲ. ಅವನ ಗುಣಗಳನ್ನು ಕಂಡು, ಅನುರಾಗದಿಂದ, ಇತರ ರಾಜರುಗಳು, ಅವನ ಆಜ್ಞೆಯನ್ನು, ಹೂಮಾಲೆಯಷ್ಟು ಹಗುರವೆಂಬಂತೆ, ಹೂಮಾಲೆಯಂತೆ ಅಲಂಕಾರವೆಂಬಂತೆ, ತಲೆಯೊಡ್ಡಿ ಹೊತ್ತು ನಡಸುತ್ತಿದ್ದಾರೆ.

೨೨. ಹೀಗೆ ಎಲ್ಲರೂ ತನ್ನ ಆಜ್ಞಾನುವರ್ತಿಗಳಾಗಿ ನಡೆಯುವಂತೆ ಮಾಡಿಕೊಂಡು, ರಾಜ್ಯವನ್ನು ಭದ್ರಪಡಿಸಿದವನು, ಈಗ ಯಜ್ಞಯಾಗಾದಿಗಳನ್ನು ನಡಸಲು ತೊಡಗಿದ್ದಾನೆ. ತಾನು ಇಲ್ಲದ ಹೊತ್ತಿನಲ್ಲಿ ರಾಜ್ಯದ ವ್ಯವಸ್ಥೆ ತಪ್ಪಬಾರದೆಂದು, ದುಶ್ಶಾಸನನಿಗೆ ಯುವರಾಜಪಟ್ಟ ಕಟ್ಟಿದ್ದಾನೆ. ಅವನೋ ಯೌವನದಿಂದ ಕೂಡಿದವನು, ಉದ್ಧತನಾದವನು, ಅಡಿಯವರು ಅತಿಕ್ರಮಿಸಿದರೆ ಅವರನ್ನು ಅಡಗಿಸುವ ದರ್ಪ ಸಾಮರ್ಥ್ಯಗಳುಳ್ಳವನು. ಅಂಥ ತಮ್ಮನಿಗೆ ರಾಜ್ಯದ ಭಾರವನ್ನು ವಹಿಸಿ, ತಾನು ನಿರ್ಯೋಚನೆಯಿಂದ ಯಾಗ ಮಾಡಲು ಮನಸ್ಸುಮಾಡಿ, ಗುರುಗಳಾದ ಕೃಪಾಚಾರ್ಯ ದ್ರೋಣಾಚಾರ್ಯರುಗಳ ಮಾತಿನ ಮೇರೆಗೆ ಹವ್ಯಗಳಿಂದ ಅಗ್ನಿಯನ್ನು ಒಲಿಸಿಕೊಳ್ಳುತ್ತಿದ್ದಾನೆ.

೨೩. ಆದರೂ, ವಾಸ್ತವವಾಗಿ ನೋಡಿದರೆ, ದುರ್ಯೋಧನನಿಗೆ ನೆಮ್ಮದಿಯಿಲ್ಲ. ಯಾರು ಯಾರು ಶತ್ರುರಾಜರು ಇರಬಹುದೋ ಅವರನ್ನೆಲ್ಲ ನಾಶ ಮಾಡಿದ್ದಾನೆ; ತನ್ನ ಪ್ರಭುತ್ವವನ್ನು ಭದ್ರವಾಗಿ ಸ್ಥಾಪಿಸಿದ್ದಾನೆ; ಸಮುದ್ರದ ವರೆಗೂ ಇರುವ ಸರ್ವ ಭೂಮಿಗೂ ತಾನು ಏಕೈಕ ಅಧಿರಾಜನಾಗಿದ್ದಾನೆ. ಆದರೂ, ನಿನ್ನ ಕಡೆಯಿಂದ ಏನು ಅಪಾಯ ಯಾವಾಗ ಒದಗೀತೋ ಎಂದು, ತಾನು ನಿನಗೆ ಮಾಡಿದ ಅನ್ಯಾಯಗಳನ್ನು ನೆನೆದು ನೆನೆದು, ಭಯಪಡುತ್ತಿದ್ದಾನೆ. 'ಪ್ರಬಲರಾದ ಶತ್ರುಗಳ ದೆಸೆಯಿಂದ ಕಷ್ಟಗಳು ತಪ್ಪಿದ್ದಲ್ಲ!' ಎಂದು ಹಿರಿಯರಾಡುವ ಮಾತು ಸುಳ್ಳಲ್ಲ ಎಂಬುದು ಅವನಿಗೂ ಗೊತ್ತು.

೨೪. ಆಗಾಗ್ಗೆ, ಅದು, ಇದು ಮಾತನಾಡುವಾಗ, ನಡುವೆ ಯಾರಾದರೂ ನಿನ್ನ ಹೆಸರನ್ನು ಎತ್ತುತ್ತಾರೆ. ಆ ಕೂಡಲೆ ಅವನಿಗೆ ಅರ್ಜುನನ ಪರಾಕ್ರಮ ಜ್ಞಾಪಕವಾಗುತ್ತದೆ: ಮತ್ಸ್ಯಯಂತ್ರವನ್ನು ಭೇದಿಸಿದ್ದು, ರಾಜಸೂಯದ ಕಾಲದಲ್ಲಿ ದಿಗ್ವಿಜಯ ಮಾಡಿದ್ದು, ವನವಾಸ ಕಾಲದಲ್ಲಿ ಆದ ಜಯದ್ರಥನ ಭಂಗ, ಚಿತ್ರಾಂಗದನ ಸೆರೆಯಿಂದ ತನಗಾದ ಮೋಕ್ಷ, ಇತ್ಯಾದಿ. ಆಗ ಅವನ ಮುಖ ತಗ್ಗುತ್ತದೆ. ಲಜ್ಜೆಯಿಂದ, ಭಯದಿಂದ, ವ್ಯಸನದಿಂದ ಪರವಶನಾಗುತ್ತಾನೆ. ಸಹಿಸಲು ಕಠಿನವಾದ ಗರುಡ ಮಂತ್ರಾಕ್ಷರಗಳಿಂದ ಹಾವು ಹೇಗೆ ಸುಕ್ಕಿ ಹಿಂದೆ ತೆಗೆಯುವುದೋ ಹಾಗೆಯೇ ಹೆದರಿ ಹಿಂದೆಗೆಯುತ್ತಾನೆ ದುರ್ಯೋಧನ.

೨೫. ಆ ಕೂಡಲೆ, ಏನಾದರೂ ಮಾಡಿ ನಿಮಗೆ ದ್ರೋಹ ನಡಸಬೇಕೆಂದು ನಿಶ್ಚಯಿಸುತ್ತಾನೆ. ಇದು ನಾನು ಹೋಗಿ ನೋಡಿ ಕೇಳಿ ತಿಳಿದುಬಂದಿರುವ ದುರ್ಯೋಧನನ ವೃತ್ತಾಂತ. ಇದಕ್ಕೆ ಏನು ಪ್ರತಿಕಾರ ಮಾಡಬೇಕೋ ಅದನ್ನು ಯೋಚಿಸಿ ಮಾಡುವುದು ನಿಮಗೆ ಗೊತ್ತು. ಹಸ್ತಿನಾಪುರದವರು ಏನೇನು ಮಾತನಾಡಿಕೊಳ್ಳುತ್ತಿದ್ದರೋ ಅದನ್ನು ಹಾಗೇ ತಂದು ತಿಳಿಸುವುದಷ್ಟೆ ನನ್ನ ಕರ್ತವ್ಯ. ಕೇಳಿದ ಸುದ್ದಿಯನ್ನು ತಂದುಕೊಡುವುದು ಅಷ್ಟೆ ನಮ್ಮ ಮಾತಿಗೆ ಬೆಲೆ; ಅದಕ್ಕೆ ಯೋಗ್ಯವಾದ ಪ್ರತಿಕಾರ ಮಾಡಿದಾಗ ಮಾತ್ರ ಅದರ ಬೆಲೆ ಅಧಿಕವಾಗುತ್ತದೆ.

೨೬. ವಟುವೇಷದ ಆ ವನಚಾರಿಯು ಹೀಗೆ ಹೇಳಿದನು. ಧರ್ಮರಾಯನು ಸಂತೋಷಪಟ್ಟು ಅವನನ್ನು ಬಹುಮಾನಿಸಿದನು. ದೂತನು ಬಹುಮಾನವನ್ನು ತೆಗೆದುಕೊಂಡು ಆ ಕಡೆ ಹೋದ ಮೇಲೆ, ಧರ್ಮರಾಯನು ದ್ರೌಪದಿ ಇದ್ದ ಕಡೆಗೆ ಹೋದನು. ಅಲ್ಲಿ ಅವನ ನಾಲ್ವರು ತಮ್ಮಂದಿರೂ ಇದ್ದರು. ವನವಾಸಿ ನಾಯಕನು ತನಗೆ ಏಕಾಂತದಲ್ಲಿ ಹೇಳಿದ ವರ್ತಮಾನವನ್ನೆಲ್ಲ ಅರಸನು ತನ್ನ ತಮ್ಮಂದಿರಿಗೂ ಹೆಂಡತಿಗೂ ತಿಳಿಸಿದನು.

೨೭. ಶತ್ರುಗಳು ತಾವು ಅನ್ಯಾಯದಿಂದ ಸಂಪಾದಿಸಿದ ರಾಜ್ಯವನ್ನು ಹೇಗೆ ದಕ್ಕಿಸಿಕೊಳ್ಳುತ್ತಿದ್ದಾರೆ, ಯಜ್ಞಾದಿಗಳನ್ನು ಮಾಡುತ್ತಿದ್ದಾರೆ ಎಂಬುದನ್ನೆಲ್ಲ ದ್ರೌಪದಿಯು ಕೇಳಿದಳು. ಕೌರವರಿಂದ ತಮಗೆ ಆದ ಅಪರಾಧಗಳನ್ನೆಲ್ಲ ಜ್ಞಾಪಿಸಿಕೊಂಡಳು. ಅವಮಾನದಿಂದಲೂ ದುಃಖದಿಂದಲೂ ಕೋಪದಿಂದಲೂ ಆಕೆಗೆ ಸಹನೆ ತಪ್ಪಿತು. ಧರ್ಮರಾಜನಿಗೂ ಕೋಪ ಬರಬೇಕು, ಅವನು

ಕೌರವರನ್ನು ನಿರ್ಮೂಲಮಾಡುವ ಕಾರ್ಯಕ್ಕೆ ಆರಂಭಿಸಬೇಕು—ಅಂತಹ ಕೆರಳಿಸುವ ಶಕ್ತಿಯುಳ್ಳ ಮಾತುಗಳನ್ನು ಹೀಗೆ ಹೇಳತೊಡಗಿದಳು:

೨೮. ನೀನು ಗಂಡಸು, ಎಲ್ಲವನ್ನೂ ತಿಳಿದವನು. ನಾನು ಹೆಂಗಸು, ನಿನ್ನಷ್ಟು ನನಗೆ ತಿಳಿಯದು. ನನ್ನಂಥವರು ನಿನ್ನಂಥವರಿಗೆ, ಹೀಗೆ ಮಾಡಬಹುದು, ಹೀಗೆ ಮಾಡಬಾರದು, ಎಂದು ಸೂಚನೆ ಮಾಡಿದರು ಕೂಡ, ಅದು ನಿಮಗೆ ಗೊತ್ತಿಲ್ಲವೆಂದು ದೂಷಿಸಿದಹಾಗಾಗುತ್ತದೆ. ಆದರೂ ನಾನು ಬಾಯಿ ಮುಚ್ಚಿಕೊಂಡು ಸುಮ್ಮನಿರಲಾರೆ. ನಿನಗೂ ನಿನ್ನ ತಮ್ಮಂದಿರಿಗೂ ನಿಮ್ಮ ಪತ್ನಿಯಾದ ನನಗೂ ಒದಗಿರುವ ದುಃಖವು ನನ್ನ ಬಾಯಿಂದ ಈ ಮಾತುಗಳನ್ನು ಆಡಿಸುತ್ತಿದೆ. ಆದ್ದರಿಂದ, ಹೆಂಗಸಾದವಳು ಗಂಡಸರ ನಡುವೆ ಹೀಗೆ ಹೇಳಬಾರದು ಎಂದು ಗೊತ್ತಿದ್ದರೂ, ಸಹಜವಾದ ನಾಚಿಕೆಯನ್ನು ಕಿತ್ತೊಗೆದು ಮಾತಾಡುತ್ತಿದ್ದೇನೆ.

೨೯. ನಿನ್ನ ಪೂರ್ವಿಕರಾದ ಚಂದ್ರವಂಶದ ರಾಜರುಗಳು ಬಲದಲ್ಲಿ ಇಂದ್ರನಿಗೆ ಸಮನಾಗಿ ಬಾಳಿದರು. ಅಖಂಡವಾದ ಭೂಮಂಡಲವನ್ನು ಚಿರಕಾಲ ಆಳಿದರು. ಅಂಥ ವಂಶದವನಾದ ನೀನು ನಿನ್ನ ಪಾಲಿಗೆ ಬಂದ ರಾಜ್ಯವನ್ನು ನೀನಾಗಿಯೇ, ಪಗಡೆಯಾಡುವ ನೆಪದಿಂದ, ಕೈಯಾರೆ ಎಸೆದುಬಿಟ್ಟಿದ್ದೀಯೆ. ಮದದಿಂದ ಮೈಮರೆತ ಕಾಡಾನೆ, ತನಗೆ ಅಲಂಕಾರ ಮಾಡಿದ ಹೂಮಾಲೆಯನ್ನು ತನ್ನ ಸೊಂಡಿಲಿನಿಂದ ಕಿತ್ತು ಬಿಸಾಡುವಂತೆ ನೀನೂ ಮಾಡಿಕೊಂಡಿದ್ದೀಯೆ.

೩೦. ದುರ್ಯೋಧನನು ಕಪಟದಿಂದ ನಿನ್ನ ರಾಜ್ಯವನ್ನು ಪಡೆದನು. ಅವನಲ್ಲಿ ನೀನು ಕಪಟದಿಂದ ವರ್ತಿಸುವುದೇ ಯುಕ್ತ. ಅದು ಬಿಟ್ಟು ಬುದ್ಧಿಹೀನನಂತೆ ನೀನು ಋಜು ಮಾರ್ಗವನ್ನು ಹಿಡಿದರೆ, ನಿನ್ನ ಪಾಲಿಗೆ ಬರುವ ಫಲವೇನು? ಸೋಲೊಂದೇ. ಯುದ್ಧಕ್ಕೆ ಹೋದವರು ಮೈಯನ್ನು ರಕ್ಷಿಸುವ ಲೋಹದ ಕವಚವನ್ನು ಧರಿಸದೆ ಹೋದರೆ, ಶತ್ರುಗಳ ಹರಿತವಾದ ಬಾಣಗಳು ಅವರ ಮೈಯನ್ನು ಪ್ರವೇಶಿಸಿ ಅವರನ್ನು ಕೊಲ್ಲುವುವು. ಅದರಂತೆಯೇ, ಸಾಮೋಪಾಯಕ್ಕೆ ಸಗ್ಗದೆ ಸೆಡೆತು ನಿಂತ ಶತ್ರುಗಳನ್ನು ಅವರಂತೆಯೇ ಶಠತನದಿಂದ ಎದುರಿಸದಿದ್ದರೆ, ಆತ್ಮಹಾನಿಯಾಗುವುದು ಖಂಡಿತ.

೩೧. ನಿನಗೆ ಸ್ವಂತ ಸಾಮರ್ಥ್ಯವುಂಟು; ತಮ್ಮಂದಿರ ಸಹಾಯವುಂಟು,

ಧರ್ಮ ನಿನ್ನ ಕಡೆಗುಂಟು, ಇಷ್ಟೆಲ್ಲ ಸಾಧನವುಂಟು. ನಿನ್ನ ವಂಶದವರು ಪರಾಕ್ರಮಿಗಳೆಂಬ ಅಭಿಮಾನವೂ ನಿನಗುಂಟು. ಹೀಗಿದ್ದರೂ, ಆದ ಅವಮಾನಗಳನ್ನೆಲ್ಲ ನಿನ್ನಂತೆ ಸಹಿಸಿಕೊಂಡಿರುವ ರಾಜ ಬೇರೊಬ್ಬನುಂಟೆ? ಭೂಪತಿ ನೀನು. ನಿನ್ನ ಪತ್ನಿಯಾದ ಭೂಮಿ ನಿನ್ನ ಪತ್ನಿಯಾದ ನನ್ನ ಹಾಗೆಯೇ ನಿನ್ನ ಗುಣಗಳಿಗಾಗಿ ನಿನಗೆ ಒಲಿದವಳು. ನಾವಿಬ್ಬರೂ ಸತ್ಕುಲದಲ್ಲಿ ಬಂದವರು, ನಾವಿಬ್ಬರೂ ನಿನಗೆ ಮನಃಪ್ರಿಯೆಯರು. ನಿನ್ನ ಪಾಲಿನ ಐಶ್ವರ್ಯವಾದ ನಮ್ಮನ್ನು ಶತ್ರು ಎಳೆದೊಯ್ಯುವುದಕ್ಕೆ ನೀನು ಅವಕಾಶ ಕೊಟ್ಟೆಯಲ್ಲ! ಭೂಮಿಯನ್ನು ಅವನು ಜೂಜಿನಿಂದ ಎಳೆದುಕೊಂಡ. ನನ್ನನ್ನು ತಮ್ಮನಿಂದ ರಾಜಸಭೆಗೆ ಎಳೆತರಿಸಿದ. ಇದನ್ನು ಹೇಗೆ ತಾನೆ ನೀನು ಸಹಿಸಿಕೊಂಡಿರುವುದು ಸಾಧ್ಯ?

೩೨. ನೀನು ನಡೆಯುತ್ತಿರುವ ದಾರಿಯನ್ನು ನೋಡಿದರೆ, ಅಭಿಮಾನವುಳ್ಳವರೆಲ್ಲರೂ 'ಇದು ಸರಿಯಾದದ್ದಲ್ಲ' ಎಂದು ನಿಂದಿಸುತ್ತಾರೆ. ನೀನೋ ಸಾಮಾನ್ಯನಲ್ಲ; ಮನುಷ್ಯನಾದರೂ ದೇವತೆಗಳಿಗೆ ಸಮಾನನಾದವನು. ಈ ಅಯುಕ್ತವಾದ ಮಾರ್ಗದಲ್ಲಿ ಒದ್ದಾಡುತ್ತಿದ್ದೀಯೆ. ನ್ಯಾಯವಾಗಿ ನೋಡಿದರೆ, ಸತ್ತ್ವಶಾಲಿಯಾದ ನಿನ್ನಂಥವನಿಗೆ ಆಗಿರುವ ಅವಮಾನದಿಂದ ನಿನಗೆ ಎಷ್ಟು ರೋಷ ಬರಬೇಕು! ಸಣ್ಣ ಪುಟ್ಟ ಗಿಡಮರಗಳಿಗೆ ಬೆಂಕಿ ತಾಕಿದರೆ, ಅವು ಕೊಂಚ ಕಾಲ ಉರಿದು, ಅನಂತರ ಆರುವುದು ಸಹಜ. ಆದರೆ ನೀನು ಒಣಗಿದ ಬನ್ನಿಯ ಮರದಂತೆ ಸಾರವುಳ್ಳವನು; ನಿನಗೆ ಆಗಿರುವ ಅವಮಾನ ಕಾಡುಕಿಚ್ಚಿನಂಥದು! ನಿನಗೆ ಎಷ್ಟು ರೋಷ ಬರಬೇಕು! ಅದು ಎಷ್ಟು ನಾಲಗೆ ಚಾಚಬೇಕು! ಯಾರು ಯಾರನ್ನು ಸುಟ್ಟು ಉರಿಸಿ ಬೂದಿ ಮಾಡಬೇಕು!

೩೩. ಶಕ್ತನಾದ ನೀನು ಕೋಪ ಮಾಡಿದರೆ, ಅದು ವ್ಯರ್ಥವಾಗತಕ್ಕದ್ದಲ್ಲ. ನಿನ್ನ ರಾಜ್ಯವನ್ನು ನೀನು ಪಡೆಯುವುದಕ್ಕೆ ಅಡ್ಡಿಯಾಗಿರುವವರನ್ನು ನೀನು ಕುಟ್ಟಿ ಕೆಡಹಬಲ್ಲೆ. ಹಾಗೆ ಮಾಡು, ಜನರೆಲ್ಲ ತಾವಾಗಿಯೇ ಬಂದು ನಿನಗೆ ವಶರಾಗುತ್ತಾರೆ. 'ಯಾವನಿಗೆ ಕೋಪ ಬರುವುದಿಲ್ಲವೋ ಅಂಥವನೊಡನೆ ಸ್ನೇಹ ಬೆಳಸಿದ್ದರಿಂದ ಏನು ಪ್ರಯೋಜನ? ತನಗೆ ಅನ್ಯಾಯವಾದಾಗ ತೆಪ್ಪಗೆ ಸಹಿಸಿಕೊಂಡಿದ್ದವನು, ನಮಗೆ ಏನಾದರೂ ಆದಾಗ ಏನು ನೆರವಾದಾನು?' ಎಂದು, ಕೋಪವಿಲ್ಲದವನ ಹತ್ತಿರ ಯಾರೂ ಸೇರುವುದಿಲ್ಲ. 'ಇವನಿಗೆ ಏನು ಮಾಡಿದರೂ ಕೋಪ ಬರುವುದಿಲ್ಲ. ಆದ್ದರಿಂದ ಇವನ ಮೇಲೆ ವೈರವನ್ನು

ನಾವು ಬೆಳಸಿದರೂ ಇವನಿಂದ ನಮಗೆ ಯಾವ ಅಪಾಯವಾಗುವ ಭಯವೂ ಇಲ್ಲ' ಎಂದು ಎಲ್ಲರೂ ಅಂಥವನನ್ನು ಅಲಕ್ಷಿಸಿ ಅವನಿಗೆ ಎದುರು ಬೀಳುವರು.

೩೪. ಬಲಶಾಲಿಯಾದ ನಿನ್ನ ತಮ್ಮ ಭೀಮನು, ಹಿಂದೆ, ನೀನು ರಾಜ್ಯವನ್ನು ಕಳೆದುಕೊಳ್ಳುವ ಮೊದಲು, ಮೈಗೆ ರಕ್ತಚಂದನವನ್ನು ಲೇಪಿಸಿಕೊಂಡು, ಭೋಗಿಯಂತೆ ರಥದಲ್ಲಿ ತಿರುಗಾಡುತ್ತ, ಮೆರೆಯುತ್ತಿದ್ದನು; ಶತ್ರುಗಳ ರಕ್ತವು ಅವನ ರಥಕ್ಕೆ ಚಂದನದಂತೆ ಲೇಪವಾಗುತ್ತಿತ್ತು. ಅದೇ ಭೀಮನು ಈಗ ಇಲ್ಲಿ ಕಾಲುನಡಗೆಯಿಂದ ಬೆಟ್ಟಗುಡ್ಡಗಳಲ್ಲಿ ಅಲೆದಾಡುತ್ತಿದ್ದಾನೆ. ಅವನ ಮೈಗೆ ಚಂದನದ ಬದಲು ದೂಳು ಮೆತ್ತಿಕೊಂಡಿದೆ. ನೀನೋ, ಸತ್ಯವೇ ನಿನ್ನ ಸರ್ವಸ್ವವೆಂದುಕೊಂಡು, ಹದಿಮೂರು ವರುಷಗಳ ಅವಧಿ ಮುಗಿಯುವ ವರೆಗೂ ಏನೂ ಪ್ರತಿಕಾರ ಮಾಡುವುದಿಲ್ಲವೆಂದಿದ್ದೀಯೆ. ಶತ್ರುಗಳನ್ನು ಸಂಹಾರಮಾಡುವ ಶಕ್ತಿಯುಳ್ಳ ಭೀಮನ ಅವಸ್ಥೆಯನ್ನು ನೋಡುತ್ತಿದ್ದು ಕೂಡ, ನಿನ್ನ ಮನಸ್ಸಿಗೆ ನೋವಾಗುವುದಿಲ್ಲವೇನು?

೩೫. ಇನ್ನು ಈ ಅರ್ಜುನ! ಇಂದ್ರನಿಗೆ ಸಮಾನನಾದ ಪ್ರತಾಪಶಾಲಿ. ಹಿಂದೆ ನೀನು ರಾಜಸೂಯಕ್ಕೆ ಮನಸ್ಸು ಮಾಡಿದಾಗ, ಉತ್ತರದ ಕುರುದೇಶದ ಮೇಲೆ ದಂಡೆತ್ತಿ ಹೋಗಿ, ಎಣಿಕೆಗೆ ಸಿಕ್ಕಲಾರದಷ್ಟು ಚಿನ್ನ ಬೆಳ್ಳಿಗಳನ್ನು ಗೆದ್ದು ತಂದುಕೊಡಲಿಲ್ಲವೆ? ಅಂಥವನು ಈಗ ನಿನಗೆ ಮರದ ನಾರನ್ನು ಉಡಲು ತಂದು ಕೊಡುವ ದುರವಸ್ಥೆಗೆ ಇವನನ್ನು ಇಳಿಸಿದ್ದೀಯಲ್ಲ! ಫಲ್ಗುಣನ ಈ ಪತನವನ್ನು ನೋಡಿಯಾದರೂ ನಿನಗೆ, ನಿಮ್ಮನ್ನು ಈ ಸ್ಥಿತಿಗೆ ತಂದ ಕೌರವನ ಮೇಲೆ ಕೋಪ ಕೆರಳುವುದಿಲ್ಲವೆ?

೩೬. ಮಾದ್ರಿಯ ಅವಳಿ ಮಕ್ಕಳಾದ ಈ ನಿನ್ನ ತಮ್ಮಂದಿರನ್ನು ನೋಡು. ಕಾಡಿನ ನೆಲವೇ ಇವರಿಗೆ ಮಲಗುವ ಹಾಸಿಗೆಯಾಗಿದೆ. ಅದರಿಂದ ಇವರ ದೇಹ ತನ್ನ ಸಹಜವಾದ ಕೋಮಲತೆಯನ್ನು ಕಳೆದುಕೊಂಡು ಕರ್ಕಶವಾಗಿದೆ. ಕೂದಲೆಲ್ಲ ಕೆದರಿಹೋಗಿ, ಬೆಟ್ಟದ ಕಾಡಾನೆಗಳಂತೆ ಇರುವರಲ್ಲ! ಇವರನ್ನು ನೋಡಿಯೂ ನಿನ್ನ ಶಾಂತಿ ಸಂಯಮಗಳನ್ನು ನೀನು ಬಿಡದೆ ಇರುವೆಯಲ್ಲ, ಇದು ಆಶ್ಚರ್ಯ! ಇವರು ಮಾದ್ರಿಯ ಮಕ್ಕಳೆಂಬ ಕಾರಣದಿಂದ, ಇನ್ನೂ ಎಳೆಯವರೆಂಬ ಕಾರಣದಿಂದ, ಸಹದೇವನನ್ನು ಜೋಪಾನವಾಗಿ ನೋಡಿಕೋ

ಎಂದು ವನಪ್ರಯಾಣದ ವೇಳೆಯಲ್ಲಿ ಕುಂತಿ ವಿಶೇಷವಾಗಿ ಹೇಳಿದ ಕಾರಣದಿಂದ, ಇವರ ಮೇಲಾದರೂ ನಿನಗೆ ಕರುಣೆಯಿರಬೇಕು.

೩೭. ನಿನ್ನ ಬುದ್ಧಿ ಏಕೆ ಹೀಗಾಯಿತು ಎಂಬುದು ನನಗೆ ಅರ್ಥವಾಗುತ್ತಿಲ್ಲ. ನಿನ್ನ ಮನಸ್ಸಿನಲ್ಲಿ ಏನಿದೆಯೋ ನಾನರಿಯೆ. ಒಬ್ಬೊಬ್ಬರ ಮನಸ್ಸಿನ ವ್ಯಾಪಾರ ಒಂದೊಂದು ರೀತಿಯಾಗಿರುತ್ತದೆ. ನಿನಗೆ ಒದಗಿದ ಆಪತ್ತನ್ನು ಕುರಿತು ನೀನು ಚಿಂತಿಸದೆ ಸಹಿಸುತ್ತಿದ್ದರೆ, ಅದೇ ಆಪತ್ತನ್ನು ಕುರಿತು ಸದಾ ಚಿಂತಿಸುತ್ತ, ದೊಡ್ಡ ದುಃಖದಿಂದ, ನನ್ನ ಮನಸ್ಸು ಯಾವಾಗಲೂ ನೋಯುತ್ತಿರುತ್ತದೆ.

೩೮. ನಿನ್ನ ತಮ್ಮಂದಿರ ದುರ್ದೆಸೆ ಹಾಗಿರಲಿ. ನಿನ್ನ ಅಪದೆಸೆಯನ್ನಾದರೂ ಗಮನಿಸು. ಹಿಂದೆ ನೀನು ಬಹುರತ್ನಖಚಿತವಾದ ಮಂಚದಲ್ಲಿ ಮಲಗಿ ನಿದ್ರಿಸುತ್ತಿದ್ದೆ. ಬೆಳಗ್ಗೆ ವಂದಿಗಳಾದ ಹೆಂಗಸರು ಬಂದು ಹಾಡುತ್ತಿದ್ದ ಮಂಗಳಗೀತಗಳನ್ನು ಕೇಳಿ ಎಚ್ಚರಗೊಳ್ಳುತ್ತಿದ್ದೆ. ಈಗಲಾದರೋ, ಬರಿಯ ನೆಲದ ಮೇಲೆ ಹಾಸಿದ ದರ್ಭೆಯ ಹುಲ್ಲಿನಲ್ಲಿ ಮಲಗುತ್ತೀಯೆ. ರಾತ್ರಿಯೆಲ್ಲಾ ಅಶುಭವಾಗಿ ಊಳಿಡುವ ಹೆಣ್ಣುನರಿಗಳಿಂದ ನಿನ್ನ ನಿದ್ರೆ ಭಂಗವಾಗಿ, ನಿನಗೆ ಎಚ್ಚರವಾಗುತ್ತದೆ.

೩೯. ಹಿಂದೆ, ಅನೇಕ ಬ್ರಾಹ್ಮಣರಿಗೆ ಭೋಜನ ಮಾಡಿಸಿ, ಅವರು ತಿಂದು ಮಿಕ್ಕ ಶೇಷವನ್ನು ನೀನು ಉಣ್ಣುತ್ತಿದ್ದೆ. ಅದರಿಂದ ನಿನ್ನ ದೇಹ ಪುಷ್ಟವಾಗಿ, ರಮಣೀಯವಾಗಿ ಬೆಳೆಯುತ್ತಿತ್ತು. ಆದರೆ, ಈಗ ಬರಿಯ ಕಾಡುಹಣ್ಣುಗಳನ್ನು ತಿಂದು ತಿಂದು, ಅದರಿಂದ ನಿನ್ನ ಮೈ ಸೊರಗಿ ಬಡವಾಗಿದೆ. ಮೈಯಷ್ಟೆ ಅಲ್ಲ, ಅದರ ಜೊತೆಗೆ ನಿನ್ನ ಯಶಸ್ಸು ಕೂಡ ಕಂದಿ ಕುಂದಿಹೋಗಿದೆ. 'ರಾಜ್ಯವಿಲ್ಲ, ಕೋಶವಿಲ್ಲ, ಪರಾಕ್ರಮವಿದ್ದೂ ಪ್ರಯೋಜನವಿಲ್ಲ, ಶತ್ರುಗಳಿಂದಾದ ಅವಮಾನಕ್ಕೆ ಪ್ರತಿಕಾರ ಮಾಡಲಾರ' ಎಂದು ಎಲ್ಲರೂ ಆಡಿಕೊಳ್ಳುವಂತಾಗಿದೆ!

೪೦. ಹಿಂದೆ ನೀನು ರತ್ನಸಿಂಹಾಸನದಲ್ಲಿ ಕುಳಿತು ರಾರಾಜಿಸುತ್ತಿದ್ದೆ. ಆಗ ನಿನ್ನ ಪಾದಗಳಿಗೆ ಎಡೆಬಿಡದೆ ಬಂದು ವಂದಿಸುತ್ತಿದ್ದ ರಾಜರ ತಲೆಯ ಹೂಗಳ ದೂಳು ನಿನ್ನ ಕಾಲುಗಳನ್ನು ಅಲಂಕರಿಸುತ್ತಿತ್ತು. ಆದರೆ, ಅದೇ ಕಾಲು ಈಗ ಕಾಡಿನಲ್ಲಿ, ಮೃಗಪಕ್ಷಿಗಳು ನೆಕ್ಕಿರುವ ದರ್ಭೆಹುಲ್ಲಿನ ಮೇಲೆ ತಾನು ಸದಾ ಇರುವಂತಾಗಿದೆ. ನಿನಗೆ ಬಂದಿರುವ ಈ ದುರ್ದೆಸೆಯನ್ನು ನೆನೆದಾಗಲೆಲ್ಲ ನನಗೆ ದುಃಖವಾಗುತ್ತದೆ! ನಿನಗೇ ಆಗದಿರುವುದು ಆಶ್ಚರ್ಯ!

೪೧. ನಿನ್ನ ಈ ದುರ್ದೆಸೆಗೆ ನಮ್ಮ ಶತ್ರುವಾದ ದುರ್ಯೋಧನನೆ ಕಾರಣ

ಎಂಬುದು ನನ್ನ ಮನಸ್ಸನ್ನು ಬುಡಸಮೇತವಾಗಿ ಕಿತ್ತು ನೋಯಿಸುತ್ತಿದೆ. ನೀನು ನಿನ್ನ ರಾಜ್ಯಸಂಪದವನ್ನು ಶತ್ರುವಿಗೆ ಸೋತೆ ಎಂಬುದರಿಂದ ನನಗೆ ದುಃಖವಾಗುತ್ತಿಲ್ಲ. ಆದರೆ, ಮಾನಧನನಾದ ನೀನು ನಿನ್ನ ವೀರ್ಯಸಂಪದವನ್ನು ಶತ್ರುವಿಗೆ ಬಿಟ್ಟುಕೊಟ್ಟದ್ದರಿಂದ ನನಗೆ ದುಃಖವಾಗುತ್ತಿದೆ. ಈಗಲೂ ನೀನು ನಿನ್ನ ಅಭಿಮಾನವನ್ನು ಎತ್ತಿ ಹಿಡಿ, ವೀರನಂತೆ ಶತ್ರುವನ್ನು ಎದುರಿಸು; ಆಗ ನೀನು ಸೋತರೂ ಅದರಿಂದ ನನಗೆ ಸಂತೋಷವೇ. ರಾಜ್ಯ ಕಳೆದು ಹೋದ ನಷ್ಟ ಅಂಥ ದೊಡ್ಡ ನಷ್ಟವಲ್ಲ. ಆದರೆ, ಮಾನಭಂಗವನ್ನು ಮಾತ್ರ ಸಹಿಸಲು ಆಗದು! ಅದರಲ್ಲೂ ಪ್ರತೀಕಾರಕ್ಕೆ ಬೇಕಾದ ಸಾಮರ್ಥ್ಯವಿರುವಾಗ!

೪೨. ಆದ್ದರಿಂದ ಈ ಶಾಂತಿಯನ್ನು ಆಚೆಗೆ ಎಸೆ. ನಿನ್ನ ಕ್ಷತ್ರಿಯ ತೇಜಸ್ಸನ್ನು ಎತ್ತಿ ಮೆರೆ. ಶತ್ರುಗಳನ್ನು ನಾಶಮಾಡಲು ಮನಸ್ಸುಮಾಡು. ಶತ್ರುಗಳನ್ನು ಉಪೇಕ್ಷೆಯಿಂದ ಕಂಡು, ಯಾವ ಸ್ವಂತವಾದ ಆಸೆಯೂ ಇಲ್ಲದೆ, ಶಾಂತಿಯಿಂದ ಬದುಕಿದರೆ, ಮುನಿಗಳಾದವರಿಗೆ ಅದರಿಂದ ಏನಾದರೂ ಸಿದ್ಧಿ ದೊರಕುತ್ತದೆಯೆ ಹೊರತು, ಕ್ಷತ್ರಿಯರಿಗೆ ಖಂಡಿತವಾಗಿಯೂ ಈ ಆಚರಣೆಯಿಂದ ಯಾವ ಲಾಭವೂ ಆಗುವುದಿಲ್ಲ.

೪೩. ತೇಜಸ್ವಿಗಳಲ್ಲಿ ಮುಖ್ಯರಾದ ನಿಮ್ಮಂಥವರು, ಯಶಸ್ಸನ್ನು ಧನದಂತೆ ಕಾಣಬೇಕಾದವರು, ಏನೇ ತೇಜೋವಧೆ ಆದರೂ, ಎಷ್ಟೇ ಕೆಟ್ಟ ಹೆಸರು ಬಂದರೂ, ಸಹಿಸಲು ಕಷ್ಟವಾದ ಇಂಥ ಸೋಲನ್ನೂ ಅವಮಾನವನ್ನೂ ಪಡೆದರು ಕೂಡ, ಅದನ್ನು ಸಹಿಸಿಕೊಂಡು ಹರ್ಷದಿಂದ ಇರುವರು ಎಂದ ಮೇಲೆ, ಅಭಿಮಾನವೆಂಬ ಗುಣ ಬೆಳೆಯುವುದಕ್ಕೆ ಆಶ್ರಯವೇ ಮುರಿದುಹೋದ ಹಾಗಾಯಿತು. ನೀನೇ ಹೀಗಾದ ಮೇಲೆ ಮಿಕ್ಕವರಿಗೆ ಅಭಿಮಾನದ ಮೇಲು ಪಂಕ್ತಿ ಎಲ್ಲಿಂದ ಬರಬೇಕು?

೪೪. 'ಕ್ಷಮಾಗುಣವು ಬೇಕಾದ ಸುಖಗಳನ್ನು ತಾನು ತಂದುಕೊಡುತ್ತದೆ. ಸುಖವನ್ನು ಪಡೆಯಬೇಕಾದರೆ ಪರಾಕ್ರಮದ ಅಗತ್ಯವೇನೂ ಇಲ್ಲ' ಎಂಬುದೇ ನಿನ್ನ ದೃಢವಾದ ನಂಬಿಕೆಯಾಗಿದ್ದರೆ—ಹಿಡಿದಿರುವ ಬಿಲ್ಲನ್ನು ಆಚೆಗೆ ಎಸೆ; ಮುದ್ರೆ, ಹಾರ ಮುಂತಾದ ರಾಜಚಿಹ್ನೆಗಳನ್ನು ತ್ಯಜಿಸು; ಕ್ಷತ್ರಿಯನ ವೇಷ ಇನ್ನು ಸಾಕು; ಜಟೆ ಬೆಳಸು, ಬೆಂಕಿ ಹತ್ತಿಸು, ಹೋಮ ಮಾಡು; ಮುನಿಯ ವೇಷವನ್ನು ತಾಳಿಕೊ. ಕ್ಷತ್ರಿಯನ ನಡತೆಯಿಲ್ಲದ ಮೇಲೆ ಕ್ಷತ್ರಿಯನ ವೇಷವೇಕೆ ನಿನಗೆ?

೪೫. ನಿನಗೆ ಹಾನಿ ಮಾಡಲೇಬೇಕೆಂದು ಶತ್ರು ಹಟ ಹಿಡಿದಿರುವಾಗ, ಯಾರ ಮಾತನ್ನೂ ಅವನು ಕೇಳದಿರುವಾಗ, ಅವನನ್ನು ಅಡಗಿಸಲು ಬೇಕಾದ ಬಲ ಸಾಮರ್ಥ್ಯಗಳು ನಿನಗಿರುವಾಗ, ಹದಿಮೂರು ವರುಷಗಳು ಒಪ್ಪಿಕೊಂಡಿರುವ ಕಾಲ ಎಂದು ಆ ಅವಧಿಯು ಮುಗಿಯುವುದನ್ನು ಕಾಯುತ್ತ ಸುಮ್ಮನಿರುವುದು ಸರಿಯಲ್ಲ. ಶತ್ರುವನ್ನು ಸೋಲಿಸಿ ಜಯವನ್ನು ಸಂಪಾದಿಸಬೇಕೆಂಬ ಉತ್ಕಟವಾದ ಇಚ್ಛೆ ಉಳ್ಳ ರಾಜರುಗಳು ಸಂಧಿಯನ್ನು ಮುರಿದುಹಾಕುವುದಕ್ಕೆ ಏನಾದರೂ ಒಂದು ನೆಪವನ್ನು ಸೃಷ್ಟಿಸಿಕೊಳ್ಳುತ್ತಾರೆ. ನೀನು ನೆಪಕ್ಕಾಗಿ ಹುಡುಕಬೇಕಾದ್ದಿಲ್ಲ, ಕೌರವನು ನಿನಗೂ ನಿನ್ನವರಿಗೂ ಮಾಡಿರುವ ಅಪರಾಧಗಳು ಸಾಕಷ್ಟು ಕಾರಣಗಳಲ್ಲವೆ?

೪೬. ವಿಧಿ ನಿನ್ನನ್ನು ಜೂಜಿಗೆ ಎಳೆಯಿತು, ನೀನು ಹದಿಮೂರು ವರ್ಷಗಳ ಅವಧಿಯನ್ನು ನಿಯಮಿಸಿಕೊಂಡೆ. ಇದರಿಂದ ನಿನ್ನ ರಾಜತೇಜಸ್ಸು ಆರಿಹೋಯಿತು, ಮಾಸಿಹೋಯಿತು. ನಿನ್ನ ಐಶ್ವರ್ಯ ಕಡಮೆಯಾಯಿತು. ಅಡಿಯೇ ಗೋಚರವಾಗದಷ್ಟು ಆಳದ ದುಃಖಸಮುದ್ರದಲ್ಲಿ ಅದ್ದಿಹೋಗಿದ್ದೀಯೆ. ಇನ್ನು ಮುಂದಾದರೂ ನಿನಗೆ ಒಳ್ಳೆಯ ದಿವಸಗಳು ಬರಲಿ. ಸೂರ್ಯನು ಕತ್ತಲೆಯನ್ನು ನಾಶಮಾಡಿ, ಹಗಲಿನ ಮೊದಲಿನಲ್ಲಿ ತಲೆ ಎತ್ತಿದಾಗ ಅವನಿಗೆ ಹೇಗೆ ಕಾಂತಿ ಕೂಡುತ್ತ ಹೆಚ್ಚುತ್ತದೆಯೋ ಹಾಗೆಯೇ ನಿನ್ನ ಪಾಲಿಗೆ ಕತ್ತಲೆಯಂತಿರುವ ಶತ್ರುಗಳನ್ನು ನೀನು ಸಂಹಾರಮಾಡಿ, ರಾಜ್ಯಲಕ್ಷ್ಮಿಯು ವಿಜಯಲಕ್ಷ್ಮಿಯೊಂದಿಗೆ ಬೇಗ ನಿನ್ನ ಹತ್ತಿರ ಬಂದು ಪುನಃ ಸೇರುವಂತಾಗಲಿ.

* * * * *

ಮೊದಲನೆಯ ಸರ್ಗದಲ್ಲಿ ಎರಡು ಭಾಗಗಳಿರುವುದು ಸ್ವಯಂ ಸ್ಪಷ್ಟವಾಗಿದೆ: ೧. ಕಿರಾತದೂತನು ಬಂದು (೧–೩), ಧರ್ಮರಾಜನಿಗೆ ವರದಿ ಒಪ್ಪಿಸಿದ್ದು (೪–೨೫); ೨. ಧರ್ಮರಾಜನು ಆ ವರದಿಯನ್ನು ತಮ್ಮಂದಿರಿಗೂ ದ್ರೌಪದಿಗೂ ಹೇಳಿದಾಗ ದ್ರೌಪದಿಯು ಕೆರಳಿ (೨೬–೨೭), ಧರ್ಮರಾಜನಿಗೆ ಬುದ್ಧಿವಾದ ಹೇಳಿದ್ದು (೨೮–೪೬).

ಇಲ್ಲಿ ಮಾತನಾಡುವ ಪಾತ್ರಗಳ ಗುಣ, ಯಾರ ವಿಷಯವಾಗಿ ಮಾತನಾಡುವರೋ ಆ ಪಾತ್ರದ ಗುಣ ಹೇಗೆ ಚಿತ್ರಿತವಾಗಿದೆ ಎಂಬುದನ್ನು ಗಮನಿಸಿ. ದೂತ, ದ್ರೌಪದಿ ಇವರುಗಳ ವಾದದ ವೈಖರಿಯನ್ನೂ ವಿನ್ಯಾಸವನ್ನೂ ಗುರುತಿಸಿಕೊಳ್ಳಿ.

## ಎರಡನೆಯ ಸರ್ಗ

೧. ತನ್ನ ಪ್ರಿಯೆಯಾದ ದ್ರೌಪದಿಯು ಹೀಗೆ ಕಿವಿಗೆ ಇಂಪಾಗುವಂತೆ ಆಡಿದ ಮಾತು ಭೀಮನ ಮನಸ್ಸಿಗೆ ಸಂತೋಷವನ್ನು ಉಂಟುಮಾಡಿತು. ಅವಳ ಮಾತು ಯುಕ್ತವಾದದ್ದೆಂದು ಭೀಮನಿಗೆ ತೋರಿತು. ಅವಳ ಮಾತನ್ನು ಸಮರ್ಥಿಸುತ್ತ ಭೀಮನೂ ಅರಸನಿಗೆ ಅದನ್ನೇ ಹೇಳಿದನು. ಧರ್ಮರಾಯನು ಕ್ಷಮೆಯನ್ನು ಬಿಟ್ಟು ಕ್ಷತ್ರಿಯನಂತೆ ವರ್ತಿಸುವುದೇ ಯುಕ್ತವಾದದ್ದು ಎಂಬುದಕ್ಕೆ ತಕ್ಕ ಕಾರಣಗಳನ್ನು ಹೇಳಿದನು. ದುರ್ಯೋಧನನನ್ನು ಶಿಕ್ಷಿಸಿ, ತಮ್ಮ ಮಾನವನ್ನು ರಕ್ಷಿಸಿಕೊಳ್ಳುವುದು ಯೋಗ್ಯವೆಂಬ ಉದಾತ್ತವಾದ ಉದ್ದೇಶದಲ್ಲಿ ಅವನ ಮಾತುಗಳೆಲ್ಲ ನೆನೆದಿದ್ದವು. ಭೀಮನು ಹೀಗೆ ಹೇಳಿದನು:

೨. ದ್ರೌಪದಿಯು ನಮ್ಮನ್ನು ಪ್ರೀತಿಸುತ್ತಾಳೆಂಬುದು ಅವಳ ಕಣ್ಣುಗಳಿಂದಲೇ ಕಂಡುಬರುತ್ತದೆ. ದೊಡ್ಡ ವಂಶದಲ್ಲಿ ಹುಟ್ಟಿ, ದೊಡ್ಡ ವಂಶದವರನ್ನು ಮದುವೆಯಾಗಿದ್ದರೂ, ತನಗೆ ಆದ ಮಾನಭಂಗಕ್ಕೆ ನೊಂದಿದ್ದಾಳೆ. ಇವಳು ಆಡಿದ ಮಾತು ನ್ಯಾಯವಾಗಿಯೇ ಇದೆ. ಹೆಣ್ಣಾದ ಇವಳು ಇಂಥ ಬುದ್ಧಿಯ ಮಾತುಗಳನ್ನು ಎಲ್ಲಿ ಕಲಿತಳೆಂದು ನನಗೆ ಉದ್ದಕ್ಕೂ ಆಶ್ಚರ್ಯವಾಗುತ್ತಿತ್ತು. ಮಾತುಗಳನ್ನು ಬಲ್ಲ ಬೃಹಸ್ಪತಿ ಕೂಡ ಹೀಗೆ ಮಾತನಾಡಲಾರ. ಇವಳ ಮಾತು ಕೇಳಿ ಅವನಿಗೂ ಖಂಡಿತ ಆಶ್ಚರ್ಯವಾಗಬೇಕು!

೩. ಯಾವುದಾದರೂ ಜಲಾಶಯದಲ್ಲಿ ಕೆಸರು ಮೊಸಳೆಗಳಿದ್ದರೆ, ದಡ ಜಾರುತ್ತಿದ್ದರೆ, ಒಳಗೆ ಬಂಡೆಗಳಿದ್ದರೆ, ಯಾವುದೇ ಅಪಾಯಗಳಿದ್ದರೆ, ಒಳಗೆ ಇಳಿದು, ಕ್ಷೇಮವಾಗಿ ಮೇಲೇರಿ ಬರುವುದು ಕಷ್ಟ. ಆದರೆ ಯಾರಾದರೂ ಮೆಟ್ಟಿಲುಗಳನ್ನು ಮಾಡಿರುವುದಾದರೆ, ಇಳಿಯುವುದೂ ಸುಲಭ, ಮೇಲೆ ಬರುವುದೂ ಸುಲಭ. ರಾಜನೀತಿಯಲ್ಲಿಯಾದರೂ ಹೀಗೆಯೆ; ಒಳಗಿಳಿದ ಮೇಲೆ ಕ್ಷೇಮವಾಗಿ ಹೊರಗೆ ಬರುವುದು ಕಷ್ಟ. ಅದಕ್ಕೆ ಮೆಟ್ಟಿಲನ್ನು ಮಾಡಿ, ಹೀಗೆಂದು ದಾರಿ ತೋರಿಸಿಕೊಟ್ಟು ಹೇಳುವ ಗಂಡಸು ದೊರಕುವುದೇ ದುರ್ಲಭ! ಆದರೂ ಇಲ್ಲಿ ಈ ಹೆಂಗಸು ಆ ಕಾರ್ಯವನ್ನು ಮಾಡಿದ್ದಾಳೆ!

೪. ಇವಳ ಮಾತನ್ನು ಅನುಸರಿಸಿ ಕೆಲಸ ಮಾಡಿದರೆ, ಕೊನೆಗೆ ಇದರಿಂದ ಸುಖವುಂಟಾಗುತ್ತದೆ. ಇವಳ ಮಾತು ಯುಕ್ತವಾದದ್ದು; ನಮ್ಮನ್ನು ಕೆಣಕಿ,

ಕೆರಳಿಸಿ, ನಮ್ಮ ವೀರಗುಣವನ್ನು ವೃದ್ಧಿಗೊಳಿಸುವಂಥದು. ಸತ್ತ್ವವಿಲ್ಲದವರಿಗೆ ಮಾತ್ರ ಇವಳ ಮಾತಿನಿಂದ ಹಿಂಸೆಯಾಗುತ್ತದೆ. ಹೀಗೆ, ಇಷ್ಟೆಲ್ಲ ಗುಣಗಳು ಇವಳ ಮಾತಿನಲ್ಲಿ ಕಂಡುಬರುತ್ತವೆ. ಸತ್ತ್ವವುಳ್ಳ ಔಷಧವನ್ನು ಸ್ವಲ್ಪ ಪ್ರಮಾಣ ದಲ್ಲಿ ಸೇವಿಸಿದರೂ ಅದರಿಂದ ಅನೇಕ ಆರೋಗ್ಯಭಾಗ್ಯ ಉಂಟಾಗುವ ಹಾಗೆ, ದ್ರೌಪದಿ ತನ್ನ ಕಿರಿದಾದ ಮಾತುಗಳಲ್ಲಿ ಎಷ್ಟು ಹಿರಿದಾದ ರಾಜನೀತಿಗಳನ್ನು ತುಂಬಿ ತಿಳಿಸಿದ್ದಾಳೆ! ಇದು ಆಶ್ಚರ್ಯ!

೫. ದ್ರೌಪದಿಯು ಪ್ರತಿಪಾದಿಸಿದ ವಿಚಾರವು ನನ್ನ ಮನಸ್ಸಿಗೆ ಹಿಡಿಯಿತು. ಒಳ್ಳೆಯ ಗುಣಗಳನ್ನು ಕಂಡರೆ ಸಂತೋಷಪಡುವ ನಿನಗೂ ಇವಳ ಮಾತು ಒಪ್ಪಿಗೆಯಾಗಲಿ. ಉಜ್ಜ್ವಲವಾದ ವಸ್ತುಗಳನ್ನು ಎತ್ತಿಕೊಂಡು, ಅದರ ಸಾರ ತೋರಿಬರುವಂತೆ ಮಾತನಾಡಿದ್ದಾಳೆ. ವಸ್ತುಸ್ವರೂಪವನ್ನು ತಿಳಿದಂಥ ಪಂಡಿತರು, 'ಇದನ್ನು ಹೇಳಿದವರು ಯಾರು? ಗಂಡೆ? ಹೆಣ್ಣೆ?' ಎಂದು ಹೇಳಿದವರ ವಿಚಾರ ವನ್ನು ಮನಸ್ಸಿಗೆ ತಂದುಕೊಳ್ಳದೆ, ಏನು ಹೇಳಿದರೋ ಅದರ ಸಾರಾಸಾರ ಗಳನ್ನು ಕುರಿತು ವಿಚಾರಮಾಡುವರು.

೬. ದೊರೆಯೆ! ಆನ್ವೀಕ್ಷಿಕೀ, ತ್ರಯೀ, ವಾರ್ತಾ, ದಂಡನೀತಿ ಎಂಬ ನಾಲ್ಕು ವಿದ್ಯೆಗಳಲ್ಲಿ ಅತಿಶಯವಾದ ವಿವೇಕವನ್ನು ಪಡೆದುಕೊಂಡ ಬುದ್ಧಿ ವಂತನು ನೀನು. ಆದರೂ, ಈಗ ವಿಪರೀತವಾಗಿ, ಉದ್ಧಾರದ ದಾರಿಯನ್ನು ಅರಿಯದವನಂತೆ, ನೀನಾಗಿಯೇ ತಂದುಕೊಂಡ ಅಪಾಯದಲ್ಲಿ ಸಿಕ್ಕಿಕೊಂಡು ನರಳುತ್ತಿದ್ದೀಯಲ್ಲ! ಆನೆ, ಅಷ್ಟು ಬಲಶಾಲಿಯಾದದ್ದು, ಒಂದೊಂದು ಸಲ ಕೆಸರಿನಲ್ಲಿ ಸಿಕ್ಕಿಬಿದ್ದು ಒದ್ದಾಡುತ್ತದಂತೆ. ಅದು ತನ್ನನ್ನು ತಾನೇ ಉದ್ಧರಿಸಿ ಕೊಳ್ಳಬೇಕೇ ಹೊರತು, ಬೇರೆ ಯಾರೂ ಅದನ್ನು ಹೊರಗೆಳೆದುಹಾಕಲಾರರು. ನೀನಾದರೂ ನಿನ್ನ ಉದ್ಧಾರಕ್ಕೆ ನೀನೇ ಉದ್ಯಮಿಸಬೇಕು.

೭. ಹೀಗೆ, ಶತ್ರುವಾದ ದುರ್ಯೋಧನನಿಂದ ಎಷ್ಟು ದುರ್ದೆಸೆ ಸಂಭವಿಸ ಬಹುದೋ ಅಷ್ಟೂ ಎಂಟೂ ದಿಕ್ಕುಗಳಿಂದ ನಿನಗೆ ಒದಗುತ್ತಿರುವಾಗ, ಇದನ್ನೆಲ್ಲ ನಿವಾರಿಸುವ ಸಾಮರ್ಥ್ಯವಿದ್ದರೂ ನೀನು ಸಹಿಸಿಕೊಂಡಿರುವಾಗ, ಇದನ್ನು ನೋಡುವ ನಮಗೆ ತುಂಬ ಶೋಕವುಂಟಾಗುತ್ತದೆ. ನಿನ್ನ ಪೌರುಷವನ್ನು ದೇವತೆಗಳು ಕೂಡ ಕೊಂಡಾಡಿದ್ದಾರೆ. ಅಂಥದಕ್ಕೆ ಈಗ ಸರ್ವನಾಶ ಬಂದಿರು ವುದನ್ನು ನೋಡಿದರೆ ವ್ಯಸನವಾಗುತ್ತದೆ.

೮. ಶತ್ರುವಾದವನಿಗೆ ಸದ್ಯದಲ್ಲಿ ಮಹಾ ಅಭ್ಯುದಯವಾದಂತೆ ತೋರಿದರೂ, ಕೊನೆಗೆ ಅದು ದುರಂತದಲ್ಲಿ ಪರ್ಯವಸಾನವಾಗುವುದಾದರೆ, ಸುಮತಿಯಾದವನು ಅದನ್ನು ಸಹಿಸಿಕೊಂಡಿರಬಹುದು. ಆದರೆ, ತನ್ನ ಅಭ್ಯುದಯುವನ್ನು ಬಯಸುವವನು, ತನಗೆ ಜಯಶ್ರೀಯನ್ನು ತಂದುಕೊಡುವ ಶತ್ರುವಿನಾಶಕ್ಕಾಗಿ ಸಹನೆಯಿಂದ ಕಾದು ಕುಳಿತಿರುವುದಿಲ್ಲ. ಅದನ್ನು ಬೇಗನೆ ಆಗ ಮಾಡುವುದಕ್ಕಾಗಿ ತಾನು ಉದ್ಯಮಶೀಲನಾಗುವನು.

೯. ಶತ್ರುವು ನಾಶವಾಗುವ ದೊಡ್ಡ ಸಂಧಿಕಾಲವು ಇನ್ನೇನು ಇಷ್ಟರಲ್ಲೇ ಎಂದು ಕಂಡುಬಂದಾಗ, ತನಗೆ ಅಂತಹ ವಿನಾಶದ ಕಾಲ ಸದ್ಯದಲ್ಲಿ ಇಲ್ಲ ಎಂದು ಕಂಡುಬಂದಾಗ, ಜಾಣನಾದವನು ಅದನ್ನು ಉಪೇಕ್ಷೆಮಾಡುವನು; ಹಾಗಿಲ್ಲದೆ, ಶತ್ರುವಿನಾಶ ಈಗಲೇ ಆಗುವಂತಿಲ್ಲ, ನಾನು ವಿನಾಶವಾಗುತ್ತಿದ್ದೇನೆ ಎಂಬುದನ್ನು ಕಂಡುಕೊಂಡ ಜಾಣನು ಅದಕ್ಕೆ ತಕ್ಕ ಪ್ರತಿಕಾರವನ್ನು ಮಾಡುವನು.

೧೦. ಯಾವ ರಾಜರು, ತಮ್ಮ ಆಲಸ್ಯದಿಂದ, ಶತ್ರುಗಳು ತಮ್ಮ ಕೋಶವನ್ನೂ ಬಲವನ್ನೂ ಬೆಳಸಿಕೊಳ್ಳುವುದಕ್ಕೆ ಅವಕಾಶ ಕೊಡುವರೋ—ಅಂಥವರು ದುರ್ಗತಿಗೆ ಇಳಿಯುತ್ತಾರೆ. ಇಂಥ ಸೋಮಾರಿ ಅರಸನನ್ನು ಸೇವಿಸಿದರೆ, ಜನರು ನೋಡಿ ಬಯ್ಯುತ್ತಾರೆ ಎಂಬ ಭಯದಿಂದ ಸಂಪತ್ತೂ ಯಶಸ್ಸೂ ಅವನನ್ನು ಕೂಡಲೆ ಬಿಟ್ಟು ಹೋಗಿಬಿಡುತ್ತವೆ. ಉದ್ಯೋಗಶೀಲನಾದ ಪುರುಷ ಸಿಂಹನಿಗೆ ಮಾತ್ರ ಲಕ್ಷ್ಮಿ ಒಲಿದು ಬರುತ್ತಾಳೆ.

೧೧. ರಾಜನಾದರೂ ಯಾವುದೇ ಕಾರಣದಿಂದ ಏನೇ ಹೀನಸ್ಥಿತಿಗೆ ತಾನು ಇಳಿದಿರಲಿ; ತನಗೆ ಜನ್ಮದಿಂದ ಸಿದ್ಧವಾಗಿರುವ ಕ್ಷತ್ರಿಯ ತೇಜಸ್ಸನ್ನು ಇನ್ನೂ ಬೆಳಸಿಕೊಳ್ಳುವುದಕ್ಕೆ ಸಂತತವಾಗಿ ಪ್ರಯತ್ನಮಾಡುತ್ತಿದ್ದರೆ—ತನ್ನ ಅಪಾಯ ಸ್ಥಿತಿಯನ್ನು ಕಳೆದುಕೊಳ್ಳುವುದಕ್ಕೆ ಯತ್ನಿಸುತ್ತಿರುವ ಆ ದೊರೆಯನ್ನು ನೋಡಿ "ಬಿದಿಗೆಯ ಚಂದ್ರ ಹೇಗೆ ದಿನದಿನಕ್ಕೂ ಬೆಳೆದು ಪೂರ್ಣನಾಗುವನೋ ಹಾಗೆ ಈತನೂ ತಾನು ಅಭಿವೃದ್ಧಿಗೆ ಬರುವನು" ಎಂದು ಎಲ್ಲ ಜನರೂ ಆ ಕೂಡಲೆ ಅವನಿಗೆ ನಮಸ್ಕರಿಸಲು ಆರಂಭಿಸುವರು.

೧೨. ರಾಜನೀತಿಗೆ ಈ ಐದು ಅಂಗಗಳಿರತಕ್ಕದ್ದೆಂದು ನಿರ್ಣಯವಾಗಿದೆ. ಅವು ಯಾವುವು ಎಂದರೆ, ಅನುಕೂಲರಾದ ಸ್ನೇಹಿತರನ್ನು ಸಂಪಾದಿಸಿಕೊಂಡು ಕಾರ್ಯವನ್ನು ಆರಂಭಮಾಡುವುದು, ಸಮರ್ಥವಾದ ಸೈನ್ಯವನ್ನೂ ಭಂಡಾರಕ್ಕೆ

ದ್ರವ್ಯವನ್ನೂ ಒದಗಿಸಿಕೊಳ್ಳುವುದು, ಸರಿಯಾದ ದೇಶ ಕಾಲಗಳನ್ನು ನೋಡಿ ನಡೆಯುವುದು, ಅಕಸ್ಮಾತ್ತಾಗಿ ಬಂದೊದಗಬಹುದಾದ ಅಪಾಯಗಳನ್ನು ನಿವಾರಿಸಲು ಸಿದ್ಧತೆ ಮಾಡಿಕೊಳ್ಳುವುದು, ಮತ್ತು ಕೊನೆಯ ಕಾರ್ಯಸಿದ್ಧಿ. ಇಂತಹ ನೀತಿಯಿಂದ ಸಮೃದ್ಧವಾದ ಕೋಶವೂ ದಂಡಿಸಲು ಸಮರ್ಥವಾದ ಸೈನ್ಯವೂ ಸಂಪಾದನೆಯಾಗುತ್ತದೆ. ಇಂತಹ ನೀತಿಯಿಂದ ಜಯ ಲಭಿಸಬೇಕಾದರೆ, ಅದಕ್ಕೆ ದಕ್ಷತೆಯಿಂದ ಕಾರ್ಯವನ್ನು ರಚನೆಮಾಡುವ ಗುಣ ಬೇಕು. ಲೋಕದಲ್ಲಿ ವ್ಯವಸಾಯ ಮಾಡುವವರು ವಿಧಿ ಕೊಡುವ ಮಳೆ ಮುಂತಾದುವನ್ನು ಹೇಗೆ ಅವಲಂಬಿಸಿಕೊಂಡಿರುವರೋ ಹಾಗೆಯೇ ರಾಜನೀತಿಯು ದಕ್ಷತೆಗೆ ಅಧೀನವಾಗಿದೆ.

೧೩. ಮಾನಿಷ್ಠನಾದವನು, ಧೈರ್ಯದಿಂದ ಕೂಡಿದವನು, ತನಗೆ ಪ್ರಿಯವಾದ ಯಾವುದಾದರೂ ಎತ್ತರದ ಪದವಿಯನ್ನು ಪಡೆದು ಮೇಲೆ ಹೋಗುವೆನೆಂದು ಅಪೇಕ್ಷೆ ಪಡುತ್ತಾನೆ ಎನ್ನು. ಅಂಥವನು ಕೆಳಗೆ ಬೀಳುವುದನ್ನು ತಾನು ತಪ್ಪಿಸಿಕೊಳ್ಳುವುದಾದರೆ, ಅದಕ್ಕಿರುವುದು ಒಂದೇ ದಾರಿ: 'ನನಗೆ ಪೌರುಷ ಉಂಟು, ನಾನು ಈ ಕಾರ್ಯವನ್ನು ಮಾಡಲು ಸಮರ್ಥ' ಎಂದು ತನ್ನ ಪೌರುಷದ ಪ್ರಮಾಣವನ್ನು ತಾನೇ ತಿಳಿದುಕೊಳ್ಳುವುದು. ನೀನು ನಿನ್ನ ಪೌರುಷವನ್ನು ಸರಿಯಾಗಿ ತಿಳಿದಹಾಗಿಲ್ಲ.

೧೪. ತನ್ನ ಪೌರುಷವನ್ನು ತಾನು ಅರಿಯದೆ ಹೆದರಿ ಹಿಂಜರಿಯುವವನ ಮೇಲೆ ಅನೇಕ ಆಪತ್ತು ವಿಪತ್ತುಗಳು ಬಂದು ಬಿದ್ದು, ಅವನನ್ನು ಮುಚ್ಚಿಬಿಡುತ್ತವೆ. ಹೀಗೆ ವಿಪತ್ತುಗಳು ಸಂಭವಿಸಿದಾಗ, ಮುಂದೆ ಬರಬಹುದಾದ ಮಂಗಳಗಳು ಅವನ ಬಳಿಗೆ ಬಾರದೆ ದೂರ ಹೋಗುವುವು. ಬರಬಹುದಾದ ಮಂಗಳಗಳು ಯಾವಾಗ ಬಾರದೆ ಹೋಗುವುವೋ ಆಗ ಅವನು ಖಂಡಿತವಾಗಿಯೂ ಕೀಳಾಗಿಹೋಗುವನು. ಮೇಲ್ಮೆ ಯಾವನಿಗಿಲ್ಲವೋ ಅವನಿಗೆ ಐಶ್ವರ್ಯ ದೊರಕುವುದಿಲ್ಲ, ಯಶಸ್ಸು ಲಭಿಸುವುದಿಲ್ಲ.

೧೫. ಕೌರವನಿಂದ ರಾಜ್ಯವನ್ನು ಸಂಪಾದಿಸಬೇಕೆಂಬ ಉತ್ಸಾಹ ನಿನ್ನಲ್ಲಿ ಇದ್ದ ಹಾಗೆ ಇಲ್ಲ. ಇಂತಹ ನಿರುತ್ಸಾಹದಿಂದ ನಿನಗೆ ಖಂಡಿತವಾಗಿ ಅಭ್ಯುದಯವುಂಟಾಗುವುದಿಲ್ಲ. ನಿನಗೆ ಪರಮಪ್ರಿಯವಾದ ಈ ಔದಾಸೀನ್ಯವನ್ನು ಬಿಟ್ಟುಬಿಡು. ಕಾರ್ಯಾಚರಣೆಗೆ ತೊಡಗದೆ ಮೊದ್ದುಮೊದ್ದಾಗಿ ಕುಳಿತಿರುವವನಿಗೆ

ಸಂಪತ್ತು ಸಮೃದ್ಧಿಯಾಗಿ ಸೇರುವುದಿಲ್ಲ. ತಮ್ಮ ಪೌರುಷವನ್ನು ತಾವು ತಿಳಿದು, ಯಾರು ಉತ್ಸಾಹದಿಂದ ಕೆಲಸಮಾಡುವರೋ ಅವರಿಗೆ ಮಾತ್ರ ಸಮೃದ್ಧಿ ಉಂಟಾಗುತ್ತದೆ.

೧೬. ದುರ್ಯೋಧನನು ನಮ್ಮ ರಾಜ್ಯವನ್ನು ನಾವು ಅನುಭವಿಸಕೂಡದೆಂಬ ಉದ್ದೇಶದಿಂದಲೇ ಮೋಸದ ಜೂಜನ್ನು ಏರ್ಪಡಿಸಿ, ಹದಿಮೂರು ವರ್ಷಗಳ ಕಾಲವನ್ನು ನಿಯಮಿಸಿ, ತಾನು ನಮ್ಮ ರಾಜ್ಯವನ್ನು ಪಡೆದಿದ್ದಾನೆ. ಈಗ ಅದನ್ನು ತಾನು ಅನುಭವಿಸುತ್ತಿದ್ದಾನೆ. ಹದಿಮೂರು ವರ್ಷಗಳ ಕಾಲ ಏನೂ ಆತಂಕವಿಲ್ಲದೆ ಅದನ್ನು ಸೊಗಸಾಗಿ ಸವಿದು ಅದರ ರುಚಿ ಕಂಡಿರುವಾಗ, ಹದಿಮೂರು ವರ್ಷ ಮುಗಿದ ಕೂಡಲೆ ನಿನಗೆ ಅದನ್ನು ಬಿಟ್ಟುಕೊಡುವ ಮನಸ್ಸು ಅವನಿಗೆ ಹೇಗೆ ತಾನೆ ಬಂದೀತು? ಅದು ಸಾಧ್ಯವೇ ಇಲ್ಲ. ದುರ್ಯೋಧನನು ಸ್ವಭಾವದಿಂದ ಮೋಸಗಾರ, ಈ ರಾಜ್ಯದ ಮೇಲಿನ ಲೋಭ ಅವನಿಗೆ ಬೆಳೆದಿದೆ.

೧೭. ಒಂದು ವೇಳೆ, ಶತ್ರುವಾದ ದುರ್ಯೋಧನ ತಾನಾಗಿಯೇ, ನಾವು ಏನೂ ಕಾಳಗ ಮಾಡದೆ, ನಮ್ಮ ರಾಜ್ಯವನ್ನು ನಮಗೆ ಪುನಃ ಕೊಟ್ಟನೆನ್ನೋಣ. ಹೀಗೆ ಸುಲಭವಾಗಿ ನೀನು ರಾಜ್ಯಸಂಪಾದನೆ ಮಾಡಿಕೊಂಡರೆ, ನಿನ್ನ ತಮ್ಮಂದಿರಾದ ನಮ್ಮ ತೋಳುಬಲಕ್ಕೆ ಏನು ಬೆಲೆ ಬಂದ ಹಾಗಾಯಿತು? ನಾವು ಪೌರುಷವಂತರೆಂದು ಹೆಸರಾದವರು. ನಮ್ಮ ಪೌರುಷವನ್ನು ತೋರಿಸಲು ಇದೊಂದು ಒಳ್ಳೆಯ ಅವಕಾಶ. ನೀನು ಅನುಜ್ಞೆ ಕೊಡು, ಹದಿಮೂರು ವರ್ಷ ಮುಗಿಯಲಿ ಎಂದು ತಡೆಯಬೇಡ. ನಿನಗೆ ರಾಜ್ಯ ಸಿಕ್ಕುತ್ತದೆ, ನಮಗೆ ಹೆಸರು ಬರುತ್ತದೆ. ಇದಕ್ಕೆ ನೀನು ಸಮ್ಮತಿಸು.

೧೮. ಕಾಡಿನಲ್ಲಿರುವ ಸಿಂಹವನ್ನು ನೋಡು. ಹಸಿವಾದಾಗ, ಅದು ಅವರಿವರು ಕೊಡುವ ಮಾಂಸಕ್ಕಾಗಿ ಕೈಯೊಡ್ಡಿ ಕಾದಿರುವುದಿಲ್ಲ. ತಾನೇ ಮೇಲೆ ಬಿದ್ದು ಆನೆಯನ್ನು ಕೊಲ್ಲುತ್ತದೆ, ಅದನ್ನು ತಿನ್ನುತ್ತದೆ. ಆಗಲೂ ಸಣ್ಣ ಪುಟ್ಟ ಸಾಮಾನ್ಯ ಆನೆಯ ಮೇಲೆ ಬೀಳುವುದಿಲ್ಲ, ಮದಜಲದಿಂದ ಮುಖ ನೆನೆದಿರುವ ಆನೆಯನ್ನೇ ಆರಿಸಿಕೊಳ್ಳುತ್ತದೆ. ಅದರ ಹಾಗೆಯೇ, ತನ್ನ ತೇಜಸ್ಸಿನಿಂದ ಲೋಕವನ್ನು ವಶಪಡಿಸಿಕೊಳ್ಳುವಂತಹ ಮಹಾತ್ಮನು ತನಗೆ ಬೇಕಾದ ಐಶ್ವರ್ಯವನ್ನು ತಾನು ತನ್ನ ಪೌರುಷದಿಂದ ಪಡೆದುಕೊಳ್ಳುವನೆ ಹೊರತು, ಇನ್ನೊಬ್ಬರು

ತಾವಾಗಿಯೇ ತಮಗೆ ಅನುಕೂಲವಾದ ಹೊತ್ತಿಗೆ ನಿದಾನವಾಗಿ ನೀಡಲಿ ಎಂದು ಕೈಯೊಡ್ಡಿ ಕಾದಿರುವುದಿಲ್ಲ.

೧೯. ಕೌರವನು ಕಪಟದಿಂದ ಪಡೆದುಕೊಂಡ ನಮ್ಮ ರಾಜ್ಯವನ್ನು ನಾವು ನಮ್ಮ ಪೌರುಷದಿಂದ ತಿರುಗಿ ಪಡೆಯಬೇಕು. ಈ ಪ್ರಯತ್ನದಲ್ಲಿ ಒಂದು ವೇಳೆ ಸತ್ತರೂ ಸಾಯಬಹುದು. ದೇಹ ಹೇಗೂ ಒಂದಲ್ಲ ಒಂದು ದಿನ ಬಿದ್ದುಹೋಗ ಬೇಕಾದ್ದೇ. ಆದರೆ ಯುದ್ಧದಲ್ಲಿ ಅದು ಬಿದ್ದುಹೋದರೂ ಶಾಶ್ವತವಾದ ಕೀರ್ತಿ ಲಭಿಸುತ್ತದೆ. ಮಾನಿಷ್ಠನಾದವನು ಅಲ್ಪಕಾಲದ ದೇಹವನ್ನು ಕೊಟ್ಟಾದರೂ ಸದಾಕಾಲದ ಕೀರ್ತಿಯನ್ನು ಆಯ್ದುಕೊಳ್ಳುತ್ತಾನೆ. ಯುದ್ಧದಲ್ಲಿ ಗೆದ್ದರೆ, ಹೇಗೂ ರಾಜ್ಯ ಸಂಪಾದನೆಯಾಗುತ್ತದೆ. ಆದರೆ, ಯುದ್ಧದಲ್ಲಿ ಬದುಕಿಬರಲಿ ಅಥವಾ ಸತ್ತುಹೋಗಲಿ, ಎರಡು ರೀತಿಯ ಲಾಭಗಳುಂಟು: ಒಂದು ರಾಜ್ಯ ಲಾಭ, ಇನ್ನೊಂದು ಯಶೋಲಾಭ. ಈ ಎರಡು ಲಾಭಗಳಲ್ಲಿ ಯಶಸ್ಸೆ ಮುಖ್ಯ ವಾದದ್ದು. ರಾಜ್ಯಲಾಭ ಅಷ್ಟು ಮುಖ್ಯವಲ್ಲ. ಏಕೆಂದರೆ, ಆಯುಸ್ಸು ಮುಗಿದು ಇಲ್ಲಿಂದ ಹೋಗುವಾಗ ನಮ್ಮ ರಾಜ್ಯ ನಮ್ಮದಾಗಿ ಉಳಿಯುವುದಿಲ್ಲ, ನಮ್ಮ ಹೆಸರು ಮಾತ್ರ ನಮ್ಮದಾಗಿ ಉಳಿಯುತ್ತದೆ. ಈ ಮಾತು ಸತ್ಯವಾದದ್ದು.

೨೦. ಬೆಂಕಿ ತಾನು ಉರಿಯುತ್ತಿದ್ದೇನೆ ಎಂಬುದನ್ನು ತಾನು ತೋರಿಸಿ ಕೊಂಡರೆ, ಯಾರೂ ಅದರ ಮೇಲೆ ಕಾಲಿಡುವ ಸಾಹಸ ಮಾಡುವುದಿಲ್ಲ, ಅದನ್ನು ಭಯ ಗೌರವಗಳಿಂದ ಕಾಣುವರು. ಆದರೆ ಬೂದಿಯ ಗತಿ ಏನಾಗು ತ್ತದೆ ನೋಡು: ದಾರಿಯಲ್ಲಿ ಹೋಗುವ ಯಾರೆಲ್ಲರೂ ಬಂದು ಬಂದು ಅದನ್ನು ತುಳಿದುಹೋಗುವರು. ಇಂತಹ ಪರಿಸ್ಥಿತಿ ತಮಗೆ ಒದಗುವುದಾದರೆ, ಮಾನಿ ಷ್ಠರು ಮಾನ ಕಳೆದುಕೊಂಡು ಬದುಕಿರುವುದಕ್ಕೆ ಅಂಜಿ, ಪ್ರಾಣವನ್ನಾದರೂ ಬಿಟ್ಟು ತಮ್ಮ ಮಾನವನ್ನು ಕಾಪಾಡಿಕೊಳ್ಳುವರು.

೨೧. ಪುನಃ ಸಿಂಹದ ಉದಾಹರಣೆ ಕೇಳು. ಸಿಂಹದ ಗರ್ಜನೆಗೆ ಸಮಾನ ವಾದ ಗರ್ಜನೆ ಬೇರೊಂದಿಲ್ಲ. ಇದನ್ನು ಲೋಕವೂ ಬಲ್ಲುದು, ಬಹುಶಃ ಸಿಂಹವೂ ಬಲ್ಲುದು. ಆದರೂ ಗರ್ಜನೆಗೆ ಪ್ರತಿಗರ್ಜನೆ ಮಾಡುವುದು ಸಿಂಹದ ಸ್ವಭಾವ. ದೊಡ್ಡ ಜನರಿಗೂ ಇದೇ ಸ್ವಭಾವ ಉಂಟು, ಇರಬೇಕು. ತಮ ಗಿಂತ ಮತ್ತೊಬ್ಬರು ಮೇಲಾದರೆಂಬುದನ್ನು ಕಂಡರೆ, ತಾವು ಅವರನ್ನು ಮೀರಿಸ ಬೇಕೆಂದು ಪ್ರಯತ್ನ ಮಾಡುವುದು ಮಾನಿಷ್ಠರಿಗೆ ಸ್ವಭಾವ. ಕೌರವನು ಹೀಗೆ

ನಮ್ಮನ್ನು ಮೆಟ್ಟಿ ತಾನು ಮೇಲೇರುತ್ತಿರುವುದನ್ನು ತಿಳಿದೂ ನೀನು ಸಹಿಸಿ ಕೊಂಡಿರುವುದು ನಿನ್ನ ಸ್ವಭಾವಕ್ಕೆ ನೀನೇ ದ್ರೋಹಮಾಡಿಕೊಂಡ ಹಾಗಿದೆ.

೨೨. ನಾನು ಹೇಳುತ್ತಿರುವ ಈ ಸಂಗತಿಗಳೆಲ್ಲಾ ನಿನಗೆ ಗೊತ್ತಿಲ್ಲವೆಂದಲ್ಲ, ಸದ್ಯಕ್ಕೆ ಮರೆತಿದ್ದೀಯೆ. ಈ ಮರೆವಿನಿಂದ ನಿನ್ನ ಮನಸ್ಸಿಗೆ ಕತ್ತಲೆ ಬಂದಿದೆ, ಬೆಳಕು ಕಾಣುತ್ತಿಲ್ಲ. ಕತ್ತಲೆಯನ್ನು ಕಳೆದುಕೊ. ನಿನ್ನಲ್ಲಿ ಅಡಗಿರುವ ಪರಾ ಕ್ರಮವನ್ನು ತೋರ್ಪಡಿಸುವುದೆ ಸರಿಯಾದ ಕ್ರಮ. ನಮ್ಮ ಶತ್ರುವಿಗೆ, ಅವನ ಕಪಟಾಚರಣೆಗಳ ಫಲವಾಗಿ ಏನೇನು ಹಾನಿಗಳು ಸಂಭವಿಸಬಹುದೋ ಅದೆಲ್ಲ ಆಗದಂತೆ, ಅವನಿಗೆ ಅಭ್ಯುದಯವಾಗುವುದಕ್ಕೆ ಮೂಲಕಾರಣವೆಂದರೆ ನೀನೇ, ನಿನ್ನ ಪರಾಕ್ರಮವನ್ನು ತಿಳಿದು ಕೆಲಸಮಾಡದಿರುವ ನಿನ್ನ ಈ ಅಜ್ಞಾನದಿಂದ ಹುಟ್ಟಿದ ನೀತಿಯೇ! ಇದು ಸತ್ಯವಾದ ಮಾತು, ತಿಳಿದುಕೊ.

೨೩. ನೀನೇನೂ ಒಂಟಿಯಲ್ಲ, ನಿನಗೆ ನಾಲ್ವರು ತಮ್ಮಂದಿರಿದ್ದಾರೆ. ಅವ ರಾದರೂ ಸಾಮಾನ್ಯರಲ್ಲ, ಮಹಾವೀರರು. ನಾಲ್ಕು ದಿಕ್ಕಿನ ನಾಲ್ಕು ಗಜ ಗಳಿಗೆ ಸಮಾನರಾದವರು, ಯಾವ ಗುರುತಮವಾದ ಭಾರವನ್ನಾದರೂ ವಹಿಸಲು ಸಾಮರ್ಥ್ಯವುಳ್ಳವರು. ಅವರು ಮೇಲೆ ಬಂದು ಬಿದ್ದರೆ, ನಾಲ್ಕು ಸಮುದ್ರಗಳು ನಾಲ್ಕು ದಿಕ್ಕಿನಿಂದ ಮೇರೆ ಮೀರಿ ಹಾಯ್ದು ಬಂದ ಹಾಗೆ; ಅವರ ಧಾಳಿಯನ್ನು ಯಾರೂ ತಡೆದುಕೊಳ್ಳಲಾರರು. ನಾವು ನಾಲ್ವರೂ ದೇವೇಂದ್ರನಂತೆ ತೇಜ ಸ್ಸುಳ್ಳವರು. ಇಂಥವರು ಯುದ್ಧಭೂಮಿಗೆ ಬಂದರೆ, ಯಾವ ಶತ್ರು ಎದುರಿಗೆ ನಿಂತಾನು?

೨೪. ಶತ್ರುವಿನಿಂದ ನಮಗೆ ಆಗಿರುವ ಅಪರಾಧಗಳಿಂದ ನಿನ್ನ ಮನಸ್ಸಿ ನಲ್ಲಿಯೂ ಸಂತತವಾಗಿ ಅವಮಾನದ ಕ್ರೋಧದ ಬೆಂಕಿ ಉರಿಯುತ್ತಿದೆ, ಗೊತ್ತು. ಅದು ಇನ್ನಾದರೂ ಆರಬೇಕಾದರೆ, ಅದಕ್ಕೆ ಇರುವುದು ಒಂದೇದಾರಿ: ನಮ್ಮ ಶತ್ರುಗಳ ಸಂಹಾರವಾಗಲಿ. ಅವರ ಪತ್ನಿಯರು ತಮಗೆ ಒದಗಿದ ಅಶುಭದ ಅಪದೆಸೆಯ ಸೂಚಕವಾಗಿ ಕಣ್ಣಿನಲ್ಲಿ ಒಂದೇ ಸಮನೆ ನೀರು ಸುರಿ ಸಲಿ. ಅವರ ವೈಧವ್ಯದ ಕಣ್ಣೀರು ನಿನ್ನ ಕ್ರೋಧದ ಕಿಚ್ಚನ್ನು ಅಡಗಿಸಿ ಆರಿಸಲು ಸಮರ್ಥವಾಗಲಿ.

೨೫. ಭೀಮನು ಆಡಿದ ಮಾತುಗಳಿಂದ ಅವನ ಮನಸ್ಸಿನಲ್ಲಿ ಕೋಪ ಎಷ್ಟು

ತುಂಬಿತ್ತು ಎಂಬುದು ಸ್ಪಷ್ಟವಾಗಿತ್ತು. ಶಾಂತವಾದ ಪ್ರಕಾರವನ್ನು ಪ್ರದರ್ಶಿಸು ತ್ತಿದ್ದ ಧರ್ಮರಾಜನ ಎದುರಿಗೆ ಕೋಪದಿಂದ ಕಲಕಿಹೋದ ವಿಕಾರವನ್ನು ಭೀಮನು ಪ್ರದರ್ಶಿಸುತ್ತಿದ್ದನು. ಭೀಮನಾದರೋ ವಾಯುದೇವನ ಮಗ; ವಾಯುವಿನ ಸಂಬಂಧದಿಂದ ಅಗ್ನಿ ಪ್ರಜ್ವಲಿಸುವುದು ಸಹಜ. ಕೋಪವೇ ಮೂರ್ತಿಮತ್ತಾದ ಭೀಮನನ್ನು ಅಲ್ಲಿ ಯಾರು ಹದಕ್ಕೆ ತರಬೇಕು? ಈ ದುಷ್ಟ ಗಜಕ್ಕೆ ಅಂಕುಶ ಹಾಕಿ ತಿರುಗಿಸುವ ಪೌರುಷ ಯಾರಿಗುಂಟು? ಧರ್ಮರಾಜ ನೊಬ್ಬನಿಗೆ ಉಂಟು. ಆದ್ದರಿಂದ, ಭೀಮನ ಕೋಪವನ್ನು ಶಾಂತಗೊಳಿಸಲು ಧರ್ಮರಾಯನು ತಾನೇ ಉದ್ಯುಕ್ತನಾದನು. ಭೀಮನಿಗೆ ಹೇಳಿದನು:

೨೬. ಭೀಮ, ನಿನ್ನ ಹೃದಯ ಒಂದು ಮನೋಹರವಾದ ಕನ್ನಡಿಯಿದ್ದ ಹಾಗಿದೆ. ಕೊಳೆಯಿಲ್ಲದೆ ಸೊಗಸಾಗಿ ಹೊಳೆಯುವ ಕನ್ನಡಿಯಲ್ಲಿ, ಮಂಗಳ ವಾಗಿ ಮರುಬಿಂಬಿಸುವ ಪ್ರತಿಬಿಂಬ ಹೇಗೆ ನೋಡಿದವರ ಹೃದಯಕ್ಕೆ ಸಂತೋಷ ವನ್ನು ಉಂಟುಮಾಡುತ್ತದೆಯೋ ಹಾಗೆಯೇ ನೀನಾಡಿದ ಮಾತುಗಳ ಸಮೂಹ ದೊಳಗೆ ಕಂಡುಬಂದಿರುವ ನಿನ್ನ ವಿಶುದ್ಧವಾದ ಮುಂದಾಲೋಚನಾ ಬುದ್ಧಿ ಯನ್ನು ಕಂಡು ನನಗೆ ತುಂಬ ಸಂತೋಷವಾಗಿದೆ.

೨೭. ಉಚ್ಚರಿಸುವ ಅಕ್ಷರಗಳನ್ನೂ ಬಳಸುವ ಪದಗಳನ್ನೂ ಸ್ಫುಟವಾಗಿ, ಸ್ಪಷ್ಟವಾಗಿ ಹೇಳಿದ್ದೀಯೆ. ಆಡಿದ ಪ್ರತಿ ಮಾತಿನಲ್ಲಿಯೂ ಆಳವಾದ ಅರ್ಥ ವನ್ನು ಇಟ್ಟಿದ್ದೀಯೆ. ವ್ಯರ್ಥವಾದ ಒಂದು ಶಬ್ದವೂ ನಿನ್ನ ಬಾಯಿಂದ ಬಂದಿಲ್ಲ. ನಿನ್ನ ಮನಸ್ಸಿನಲ್ಲಿ ಏನುಂಟೋ ಅದನ್ನೆಲ್ಲ ಸಾರ್ಥಕವಾಗಿ ಹೇಳಿ ದ್ದೀಯೆ. ಆಡುವ ಮಾತಿನಲ್ಲೆಲ್ಲ ಹೊಸ ಅರ್ಥ, ಹೊಸ ಉದ್ದೇಶ ಇರಿಸಿ ದ್ದೀಯೆ. ನಿನ್ನ ಅಭಿಪ್ರಾಯವನ್ನು ತಿಳಿಸಲು ನೀನು ಉಪಯೋಗಿಸಿದ ಮಾತು ಸಮರ್ಥವಾಗಿದೆ. ದ್ರೌಪದಿ ಹೇಳಿದ್ದನ್ನು ನೀನು ಚೆನ್ನಾಗಿ ಸಮರ್ಥನೆ ಮಾಡಿ ದ್ದೀಯೆ.

೨೮. ಬಲಪ್ರಯೋಗ ಮಾಡಬೇಕೆಂಬ ನಿನ್ನ ವಾದಕ್ಕೆ ಯುಕ್ತವಾದ ಕಾರಣ ಗಳಿಂದ ಪುಷ್ಟಿ ಕೊಟ್ಟಿದ್ದೀಯೆ. ಆದರೂ ನಿನ್ನ ವಾದವನ್ನು ಸಮರ್ಥನೆ ಮಾಡಿಕೊಳ್ಳುವುದಕ್ಕೋಸ್ಕರ ಶಾಸ್ತ್ರದ ಮಾತುಗಳನ್ನು ದುರುಪಯೋಗಪಡಿಸಿ ಕೊಂಡಿಲ್ಲ, ಅದನ್ನು ತಿರಸ್ಕರಿಸಿಯೂ ಇಲ್ಲ. ಕ್ಷತ್ರಿಯರಾದ ನಾವು ಪರಾಕ್ರಮ ದಿಂದ ವರ್ತಿಸಬೇಕೆಂಬುದನ್ನು ಜ್ಞಾಪಿಸಿಕೊಡುವ ಉದ್ದೇಶ ನಿನಗಿಲ್ಲದಿದ್ದರೆ,

ಯಾವ ಪೂರ್ವಸಿದ್ಧತೆಗಳೂ ಇಲ್ಲದೆ, ದ್ರೌಪದಿಯು ಮಾತನ್ನು ಕೇಳಿದ ಕೂಡಲೆ ಇಷ್ಟು ಬೇಗ ಇಷ್ಟು ನಿರ್ದುಷ್ಟವಾಗಿ ಸಲ್ಲಕ್ಷಣವಾಗಿ ಹೀಗೆ ಮಾತನಾಡಲು ಯಾರಿಗೆ ಸಾಧ್ಯವಾಗುತ್ತಿತ್ತು?

೨೯. ಆದರೂ ನೀನು ಹೇಳಿದ ಕಾರ್ಯಾಚರಣೆ ಸರಿಯಾದದ್ದು ಎಂದು ನನ್ನ ಮನಸ್ಸಿಗೆ ಇನ್ನೂ ಖಚಿತವಾಗಿ ಒಪ್ಪಿಗೆಯಾಗಿಲ್ಲ; ಅದರಂತೆ ಮಾಡುವ ವಿಷಯದಲ್ಲಿ ಇನ್ನೂ ಕೆಲವು ಸಂಶಯಗಳು ಹಾಗೆಯೇ ಇವೆ. ಯಾವ ಯಾವ ಕಾಲದಲ್ಲಿ ಏನೇನು ಕೆಲಸ ಹೇಗೆ ಹೇಗೆ ಆಗಬೇಕು ಎಂಬ ಸೂಕ್ಷ್ಮವಾದ ವ್ಯತ್ಯಾಸಗಳನ್ನು ಮನಸ್ಸಿನಲ್ಲಿ ಸ್ಪಷ್ಟವಾಗಿ ಮಾಡಿಕೊಳ್ಳಬೇಕೆಂದರೆ, ಅದು ಸುಲಭದಲ್ಲಿ ಆಗತಕ್ಕಂಥದಲ್ಲ.

೩೦. ಯಾವ ಕಾರ್ಯ ಮಾಡಬೇಕಾದರೂ ದುಡುಕತಕ್ಕದ್ದಲ್ಲ, ಸಾವಧಾನ ದಿಂದ ಮಾಡಬೇಕು. ಯಾವುದೋ ಒಂದು ಕೆಲಸವನ್ನು ಮಾಡಿದರಾಯಿತು ಎಂದು ಪೂರ್ವಾಪರವಿಚಾರವಿಲ್ಲದೆ ಅವಿವೇಕದಿಂದ ಕೆಲಸಮಾಡಿದರೆ, ಅದರಿಂದ ದೊಡ್ಡ ದೊಡ್ಡ ಕಷ್ಟಗಳು ಹುಟ್ಟಿಬರುವುವು. ಅದರ ಬದಲು, ವಿವೇಕದಿಂದ ವರ್ತಿಸಿದರೆ, 'ತನ್ನ ಕೆಲಸವನ್ನು ತಿಳಿದು ಮಾಡುವ ಗುಣ ಇವನಿಗೆ ಉಂಟು' ಎಂದು ಮೆಚ್ಚಿಕೊಂಡು, ಐಶ್ವರ್ಯವೂ ಕೀರ್ತಿಯೂ ಆ ವಿವೇಕಶಾಲಿಯನ್ನು ತಾವಾಗಿಯೇ ಹುಡುಕಿಕೊಂಡು ಬಂದು, ಅವನನ್ನು ಬಿಟ್ಟು ಅಗಲದೆ ಜೊತೆಗೆ ಇರುತ್ತವೆ. ದುಡುಕಿ ಕೆಲಸಮಾಡುವುದಕ್ಕಿಂತ ಪರ್ಯಾಲೋಚಿಸಿ ಕೆಲಸಮಾಡು ವುದರಿಂದ ಬರುವ ಫಲ ಹೆಚ್ಚು ಕಾಲ ನಿಲ್ಲುವಂಥದು.

೩೧. ಚೆನ್ನಾಗಿ ಉತ್ತ ನೆಲದಲ್ಲಿ, ಬತ್ತದ ಬೀಜವನ್ನು ಹಾಕಿ, ಯಾವಾಗ ಎಷ್ಟು ನೀರು ಬೇಕೋ ಅಷ್ಟನ್ನು ಆಗ ಕೊಟ್ಟು ಕೃಷಿಮಾಡಿದರೆ, ಫಲ ಬರುವ ಶರತ್ಕಾಲದಲ್ಲಿ ಹೇಗೆ ಅದು ಸಮೃದ್ಧವಾಗಿ ಬರುವುದೋ ಅದರ ಹಾಗೆಯೇ ತಾವು ಮಾಡಬೇಕಾದ ಕಾರ್ಯವನ್ನು ಆರಂಭಿಸಿ, ಅದನ್ನು ಅವಸರಪಡದೆ ವಿವೇ ಕದ ನೀರಿನಿಂದ ಪಾಲಿಸುತ್ತಿದ್ದರೆ, ಸಕಾಲಕ್ಕೆ ರಸವತ್ತಾದ ಫಲ ತಾನಾಗಿಯೇ ಬಂದು ಕೈಗೂಡುತ್ತದೆ. ಸಾವಧಾನವಾಗಿ ನಡಸಿದ ಸಾಧನೆಯಿಂದ ಸಿದ್ಧಿ ಖಂಡಿತವಾಗಿಯೂ ಉಂಟಾಗುತ್ತದೆ.

೩೨. ನೀತಿಶಾಸ್ತ್ರವನ್ನು ಕೋಪವಿಲ್ಲದ ಮನಸ್ಸಿನಿಂದ ತಿಳಿದುಕೊಂಡಿರುವುದು ದೇಹದಲ್ಲಿ ಬಲವುಳ್ಳ ಕ್ಷತ್ರಿಯನಿಗೆ ಒಂದು ಅಲಂಕಾರ; ಬರಿಯ ಬಾಹುಬಲ

ಕ್ಕಿಂತ ಅದರೊಡನೆ ಶಾಸ್ತ್ರಬಲವೂ ಕೂಡಿದರೆ ಸೊಗಸು. ಇವೆರಡೂ ಇದ್ದ ವನಿಗೆ, ಕೋಪವನ್ನು ಅಡಗಿಸಿಡುವಂತಹ ಶಾಂತಿ ಇದ್ದರೆ ಇನ್ನೂ ಸೊಗಸು. ದೇಹಬಲವಿದ್ದು, ಜೊತೆಗೆ ಶಾಸ್ತ್ರಗಳ ತಿಳಿವಳಿಕೆಯಿದ್ದು, ಅದಕ್ಕೆ ಪೋಷಕ ವಾಗಿ ಶಾಂತಿಯೂ ಇದ್ದು, ಅಂತಹವನು ಶೌರ್ಯವನ್ನು ತೋರಿಸಿದರೆ, ಆಗ ಒಂದರಿಂದ ಒಂದಕ್ಕೆ ಚೆನ್ನಾಗಿ ಕಳೆಕಟ್ಟುತ್ತದೆ. ನೀತಿಯನ್ನು ಬಿಡದ ಹಾಗೆ ಸಂಪಾದಿಸಿಕೊಂಡ ಸಿದ್ಧಿಯೇ ಇಂತಹ ಶೌರ್ಯಕ್ಕೆ ಅಲಂಕಾರ. ಭೀಮನಾದ ನಿನಗೆ ದೇಹಬಲವುಂಟು, ಶಾಸ್ತ್ರಗಳ ತಿಳಿವಳಿಕೆಯುಂಟು; ಆದರೆ, ನಿನ್ನ ಕೋಪ ವನ್ನು ಕಡಮೆಮಾಡಿಕೊಂಡು ಶಾಂತಿಯನ್ನು ನೀನು ಬೆಳಸಿಕೊಂಡಾಗ ಮಾತ್ರ ನಿನ್ನ ಶೌರ್ಯ ತಾನು ಸಫಲವಾಗುತ್ತದೆ.

೩೩. ಮಾಡಬೇಕಾದ ಕರ್ತವ್ಯಗಳನ್ನು ಯಾವಾಗ ಮಾಡಬೇಕು, ಹೇಗೆ ಮಾಡಬೇಕು, ಏಕೆ ಮಾಡಬೇಕು ಮೊದಲಾದ ವಿಷಯಗಳನ್ನು ಕುರಿತು ಬೇರೆ ಬೇರೆ ಅಭಿಪ್ರಾಯಗಳು ಕವಿದಿರುವಾಗ, ಕೆಲಸ ಗೋಜಾಗುತ್ತದೆ, ಹೇಗೆ ಅದನ್ನು ಬಿಡಿಸಬೇಕೆಂಬುದು ತಿಳಿಯದೆ ಹೋಗುತ್ತದೆ. ಕತ್ತಲಿನಲ್ಲಿದ್ದಂತೆ ಆಗುತ್ತೇವೆ. ಕತ್ತಲೆಯಲ್ಲಿದ್ದವರಿಗೆ ಕಾಣಬೇಕಾದರೆ ಹೇಗೆ ಅತ್ಯಂತ ಶುದ್ಧವಾದ ದೀಪ ಅಗತ್ಯವೋ ಹಾಗೆ, ಶಾಸ್ತ್ರಗಳ ನಿಷ್ಕೃಷ್ಟವಾದ ಜ್ಞಾನವನ್ನು ದೀರ್ಘ ಕಾಲದ ಅಭ್ಯಾಸದಿಂದ ಪಡೆದು, ವಿವೇಕದಿಂದ ಬಳಸುವ ಜಾಣನಿಗೆ ಯಾವ ಕಾರ್ಯವನ್ನು ಹೇಗೆ ಮಾಡಿದರೆ ಮೇಲೆಂಬುದು ಸರಿಯಾಗಿ ತೋರಿಬರುತ್ತದೆ.

೩೪. ಇದಕ್ಕೆ ಹಿಂದಿನ ಹಿರಿಯರು ಹಿಡಿದು ಹೋದ ದಾರಿಯನ್ನು ನಾವು ಹಿಡಿಯುವುದು ವಾಸಿ. ಗುಣಶಾಲಿಗಳಾಗಿ, ಎಲ್ಲರ ಹೊಗಳಿಕೆಗೂ ಪಾತ್ರರಾಗಿ, ಪೂಜ್ಯರಾದವರು ಹೇಗೆ ನಡೆದರೋ ಹಾಗೆ ನಡೆದವರಿಗೆ ಏನೂ ಭಯವಿಲ್ಲ. ಹಾಗೆ ನಡೆಯುವಾಗ, ಒಂದು ವೇಳೆ ಅದೃಷ್ಟವಶಾತ್ ಅವರಿಗೇನಾದರೂ ಸೋಲು ಉಂಟಾದರೂ, ಆ ಸೋಲು ಸೋಲು ಎನ್ನಿಸಿಕೊಳ್ಳುವುದಿಲ್ಲ; ಅದು ವಿಜಯಕ್ಕೆ ಸಮ ಎನ್ನಿಸಿಕೊಳ್ಳುತ್ತದೆ. ಅವಿವೇಕದಿಂದ, ಅದೃಷ್ಟವಶಾತ್, ದುಡುಕಿ ಎಂಥದೋ ಲಾಭವನ್ನು ಪಡೆಯುವುದಕ್ಕಿಂತ ವಿವೇಕದಿಂದ ವರ್ತಿಸಿಯೂ ಕೂಡ ಅದೃಷ್ಟವಶಾತ್ ಏನಾದರೂ ನಷ್ಟ ಸಂಭವಿಸುವುದಾದರೆ, ಆ ಲಾಭಕ್ಕಿಂತ ಈ ನಷ್ಟವೇ ಹೆಚ್ಚಿನ ಬೆಲೆಯುಳ್ಳದ್ದು. ಹಿಡಿದ ಕೆಲಸ ಕೈಗೂಡುವುದಕ್ಕೆ ನಾವೊಬ್ಬರೇ ಹೊಣೆಯಲ್ಲ, ವಿಧಿಯೂ ಅದರಲ್ಲಿ ಪಾಲುಗಾರ. ವಿಧಿಯು

ಪಾಲುಗಾರಿಕೆ ಅನಿಶ್ಚಿತವಾದದ್ದು. ಆದ್ದರಿಂದ ಜಯಾಪಜಯಗಳನ್ನು ಚಿಂತಿಸದೆ, ನಾವು ಮಾಡಬೇಕಾದ್ದನ್ನು ವಿವೇಕದಿಂದ ತಾಳ್ಮೆಯಿಂದ ತಿಳಿದು ಮಾಡಿದರೆ, ಅದರಿಂದ ಬರುವ ಫಲವೇ ನಿಜವಾದ ಲಾಭ.

೩೫. ವಿಜಯವನ್ನು ಪಡೆಯಬೇಕೆಂದು ಆಸೆಪಡುವ ರಾಜರು ಇನ್ನೂ ಒಂದೆರಡು ವಿಷಯಗಳನ್ನು ಗಮನಿಸಬೇಕು. ಮಾಡುವ ಕೆಲಸಗಳಿಂದ ಕೊನೆಯಲ್ಲಿ ಏನೂ ತೊಂದರೆಗಳುಂಟಾಗಬಾರದು, ಕೊನೆಗೆ ಬರುವ ಫಲ ತುಂಬ ದೊಡ್ಡದಾಗಿ ಇರಬೇಕು. ಇದು ಆಗಬೇಕಾದರೆ, ಉಕ್ಕುತ್ತಿರುವ ಕೋಪವನ್ನು ಇಳಿಸಿ ಆರಿಸಬೇಕೆಂದು ಅವರು ಬಲ್ಲರು. ತಾವು ಶೂರರೆಂಬ ಕಾರಣದಿಂದ ದುಡುಕುವುದಿಲ್ಲ. ತಮ್ಮ ಇಷ್ಟಾರ್ಥವನ್ನು ನೆರವೇರಿಸಿಕೊಳ್ಳುವುದಕ್ಕಾಗಿ ತಮ್ಮ ಶೌರ್ಯವನ್ನು ಸರಿಯಾದ ಉಪಾಯದ ಜೊತೆಗೆ ನಡಸಿಕೊಂಡು ಹೋಗುವರು.

೩೬. ರೋಷ ಎಂಬುದು ಒಂದು ಬಗೆಯ ಕತ್ತಲೆ. ಇದನ್ನು ಹೋಗಲಾಡಿಸಲು ಸಮರ್ಥವಾದ ದೀಪವೆಂದರೆ ಬುದ್ಧಿಯೇ; ಶಾಸ್ತ್ರದಿಂದಲೂ ತಾಳ್ಮೆಯಿಂದಲೂ ತಿದ್ದಿದ ಬುದ್ಧಿಯೇ. ಸೂರ್ಯನನ್ನು ನೋಡಿ ಇಲ್ಲಿ ಪಾಠ ಕಲಿಯಬಹುದು. ರಾತ್ರಿಯೆಲ್ಲ ಬೆಳೆದು ಹಬ್ಬಿರುವ ಕತ್ತಲೆಯನ್ನು ಸೂರ್ಯನು ತನ್ನ ಕಿರಣಗಳಿಂದ ಮೊದಲು ನಾಶಮಾಡುತ್ತಾನೆ, ಅನಂತರ ಅವಸರವಿಲ್ಲದೆ ಸಾವಧಾನವಾಗಿ ಆಕಾಶದಲ್ಲಿ ಮೇಲೇರುತ್ತಾನೆ.

೩೭. ಕೋಪದಿಂದ ಹುಟ್ಟಿದ ಅಜ್ಞಾನದ ಕತ್ತಲೆ ಬೆಳೆಯುವುದನ್ನು ತಡೆಗಟ್ಟಲು ಯಾವನಿಗೆ ಶಕ್ತಿಯಿಲ್ಲವೋ ಅಂಥವನು ಎಷ್ಟೇ ದೇಹಬಲ ಪಡೆದಿರಲಿ, ಶಾಸ್ತ್ರಗಳನ್ನು ತಿಳಿದಿರಲಿ, ಏನೇ ಶೂರನಾಗಿರಲಿ, ಕೃಷ್ಣಪಕ್ಷದಲ್ಲಿ ದಿನದಿನಕ್ಕೂ ತನ್ನ ಕಳೆಗಳನ್ನು ಕಳೆದುಕೊಳ್ಳುತ್ತ ಕ್ಷಯಿಸಿಹೋಗುವ ಚಂದ್ರನಂತೆ ಕ್ರಮಕ್ರಮವಾಗಿ ತನ್ನ ಎಲ್ಲಾ ಶಕ್ತಿಗಳನ್ನೂ ಕಳೆದುಕೊಳ್ಳುವನು. ಲೋಕಕ್ಕೆ ಅಮೃತವನ್ನು ಮಳೆಗರೆಯುವ ಮಹಿಮೆಯುಳ್ಳವನು ತಾನೇ ಇಲ್ಲದೆ ನಾಶವಾಗಿ ಹೋಗುವನು.

೩೮. ಯಾವ ವೇಳೆಯಲ್ಲಿ ಮೃದುವಾಗಿ ವರ್ತಿಸಬೇಕು, ಯಾವ ವೇಳೆಯಲ್ಲಿ ಬಲವನ್ನು ಪ್ರಯೋಗಿಸಬೇಕು ಎಂಬ ಔಚಿತ್ಯವನ್ನು ತಿಳಿಯಬೇಕು. ಕೋಪದಿಂದ ಕ್ಷೋಭೆಗೊಳ್ಳದೆ, ಚಿಂತೆಗಳಿಂದ ಕಲಕಿಹೋಗದೆ, ಸಮಚಿತ್ತನಾಗಿ ಕೆಲಸ ಮಾಡಬೇಕು. ಹಾಗೆ ಮಾಡುವವನು, ಸೂರ್ಯನು ತನ್ನ ತೇಜಸ್ಸಿ

ನಿಂದ ಹೇಗೆ ಮೇಲೇರಿ ಬಂದು, ಜಗತ್ತನ್ನು ಗೆದ್ದು, ಅಧಿಪತಿಯಾಗುವನೋ ಹಾಗೆಯೇ ತಾನೂ ಆಗುವನು.

೩೯. ಐಶ್ವರ್ಯ, ಈಶ್ವರತ್ವ ಆಕರ್ಷಕವಾದದ್ದೇ. ಆದರೆ ಹೇಳಿದ ಮಾತು ಕೇಳದ ತುಂಟುಕುದುರೆಗಳ ಹಾಗಿರುವ ಇಂದ್ರಿಯಗಳನ್ನು ವಶಪಡಿಸಿಕೊಳ್ಳದವರು ಐಶ್ವರ್ಯವನ್ನು ವಶಪಡಿಸಿಕೊಳ್ಳುವುದು ಸಾಧ್ಯವಿಲ್ಲ. ಒಮ್ಮೆ ವಶಪಡಿಸಿಕೊಂಡರೂ ಮತ್ತೆ ಅದು ಎಂದಾದರೊಂದು ದಿನ ತಪ್ಪಿಸಿಕೊಂಡು ಹೋಗುತ್ತದೆ. ಮಳೆಗಾಲದಲ್ಲಿ ಮೇಘಗಳು ಬಂದು ದಟ್ಟವಾಗಿ ಸೇರಿದರೂ ಶರತ್ಕಾಲದಲ್ಲಿ ನೋಡುತ್ತಿದ್ದ ಹಾಗೆಯೇ ಅವು ಕರಗಿಹೋಗುತ್ತವೆ. ಶ್ರೀ ಎಂಬುದೂ ಹೀಗೆಯೇ ಚಂಚಲವಾದದ್ದು. ಚಂಚಲತೆಯೇ ಹುಟ್ಟುಗುಣವಾದ ಈ ಮೋಸಗಾತಿಯನ್ನು ನಮ್ಮ ಚಪಲವಾದ ಇಂದ್ರಿಯಗಳಿಂದ ಕಾಪಾಡಿ ನಿಲ್ಲಿಸಿಕೊಳ್ಳುವುದು ಸಾಧ್ಯವೆ? ಅದು ಸಮಚಿತ್ತದಿಂದ ಮಾತ್ರ ಸಾಧ್ಯ.

೪೦. ನೀನು ಗಾಂಭೀರ್ಯದಲ್ಲಿ ಸಮುದ್ರಕ್ಕೆ ಸಮಾನನಾದವನು, ಅದನ್ನೂ ಮೀರಿಸಿದವನು. ನಿನ್ನ ಧೈರ್ಯವೆಂದರೆ ಇಂತಹದು. ಸಮುದ್ರವು ಏನೇ ಕ್ಷೋಭೆಗೊಂಡರೂ ತನ್ನ ಮೇರೆಯನ್ನು ಮೀರಿ ಹೋಗುವುದಿಲ್ಲ. ನೀನು ಕೂಡ ಅದಕ್ಕಿಂತ ಗುಣದಲ್ಲಿ ಕಡಮೆಯಾಗಬಾರದು. ರೋಷದಿಂದ ಚಿತ್ತ ದುಡುಕಿದರೆ, ಅದನ್ನು ನಿಗ್ರಹಿಸುವುದಕ್ಕೆ ಬದಲಾಗಿ, ಕಾಲವಲ್ಲದ ಕಾಲದಲ್ಲಿ, ಇನ್ನೂ ಹದಿಮೂರು ವರ್ಷ ಮುಗಿಯದಿರುವಾಗ, ದುರ್ಯೋಧನನನ್ನು ಸೋಲಿಸಲು ಇನ್ನೂ ಸಿದ್ಧತೆಗಳು ನಡೆಯುತ್ತಿರುವಾಗ, ನೀನು ನಿನ್ನ ಚಿತ್ತವನ್ನು ಹೀಗೆ ಕಲಕಿಕೊಳ್ಳುವುದು ತರವಲ್ಲ; ಅದರಿಂದ ನಿನ್ನ ಇಷ್ಟಾರ್ಥ ಈಡೇರುವುದಿಲ್ಲ.

೪೧. ಹೊರಗಿನಿಂದ ಬಂದು ಮುತ್ತುವ ಶತ್ರುಗಳನ್ನು ಹೇಗೆ ಜಯಿಸುವುದೆಂಬುದನ್ನು ತಿಳಿಸುವ ರಾಜ್ಯಶಾಸ್ತ್ರವನ್ನು ಎಷ್ಟೇ ತಿಳಿದವನಾದರೂ ತನ್ನ ದೇಹದೊಳಗೆ ಇರುವ ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯಗಳೆಂಬ ಶತ್ರುಗಳ ಸಮೂಹವನ್ನು ಜಯಿಸಲು ಆಗಲಾರದಿದ್ದರೆ—ಬಹು ಬೇಗನೆ ಸರ್ವಸಂಪತ್ತುಗಳೂ ಅವನನ್ನು ಬಿಟ್ಟುಹೋಗುವುವು. ಬಹಳ ಬೇಗ ಅವನಿಗೆ ಕೆಟ್ಟಹೆಸರು ಬರುವುದು. ಅವನನ್ನು ಬಿಟ್ಟು ಹೋಗುವ ಲಕ್ಷ್ಮಿಗೂ ಚಂಚಲೆಯೆಂಬ ಕೆಟ್ಟ ಹೆಸರು ಬರುವುದು.

೪೨. ಯಾವ ... ಮಾಡಬೇಕು, ಯಾವ ಉಪಾಯದಿಂದ



ಕೆಲಸಮಾಡಬೇಕು ಎಂಬ ಮಿತಿಯನ್ನು ಕ್ರೋಧ ನಾಶಮಾಡುತ್ತದೆ. ಕ್ರೋಧ ದಿಂದ ದೇಹಕ್ಕೂ ಇಂದ್ರಿಯಗಳಿಗೂ ತಾಪವುಂಟಾಗುತ್ತದೆ. ಇಂತಹ ನಷ್ಟಕರ ವಾದ ಕ್ರೋಧ ಸಾಮಾನ್ಯರಿಗೆ ತಕ್ಕದ್ದಿರಬಹುದು. ಆದರೆ ನಿನ್ನಂತಹವನಿಗೆ ಇದು ತಕ್ಕದ್ದಲ್ಲ. ಸರಿಯಾದ ನೀತಿಯಿಂದ ಯಾವ ಕಾರ್ಯ ಸಿದ್ಧಿಯಾಗ ಬಹುದೋ ಅದು ಕ್ರೋಧದಿಂದ ನಾಶವಾಗುತ್ತದೆ. ಇಂತಹ ಕ್ರೋಧಕ್ಕೆ ನೀನು ವಶನಾಗಬಾರದು.

೪೩. ಕ್ರೋಧಕ್ಕಿಂತ ಕ್ಷಮೆ ಮೇಲು. ಕ್ಷಮೆಯನ್ನು ಆಶ್ರಯಿಸಿದರೆ, ಕಟ್ಟ ಕಡೆಯಲ್ಲಿ ಖಂಡಿತವಾಗಿಯೂ ಉಪಕಾರವಾಗುವುದು. ಕೈಗೆತ್ತಿಕೊಂಡ ಕಾರ್ಯಗಳಿಗೆ ಅತಿಶಯವಾದ ಫಲಗಳನ್ನು ತರಿಸಿಕೊಡುವುದು. ಕ್ಷಮೆಯಿಂದ ಯಾವ ಅಪಾಯವೂ ಸಂಭವಿಸುವುದಿಲ್ಲ. ಕ್ಷಮೆಯು ಶತ್ರುಗಳ ಸಮೂಹ ವನ್ನೆಲ್ಲ ನಾಶಮಾಡುತ್ತದೆ. ಕ್ಷಮೆಯು ಇಷ್ಟೆಲ್ಲ ಪ್ರಯೋಜನಗಳನ್ನು ಸಾಧಿಸಿ ಕೊಡುವ ಹಾಗೆ ಬೇರೆ ಯಾವುದೂ ಸಾಧಿಸಿಕೊಡಲಾರದು.

೪೪. ವೃಷ್ಣಿ ವಂಶದವರಾದ ಯಾದವವೀರರು ಅಭಿಮಾನಶಾಲಿಗಳಲ್ಲೆಲ್ಲ ಶ್ರೇಷ್ಠರಾದವರು. ಅವರಿಗೂ ನಮಗೂ ಸಹಜವಾದ ಪ್ರೇಮದಿಂದ ಗಾಢವಾದ ಬಾಂಧವ್ಯ ಬೆಳೆದುಬಂದಿದೆ. ನಾವಿಬ್ಬರೂ ಒಂದೇ ಮನಸ್ಸಿನವರಾಗಿದ್ದೇವೆ. ಅವರಿಗೆ ನಾವು ನಮಸ್ಕಾರ ಮಾಡುತ್ತಿದ್ದೇವೆ. ಅಂತಹವರು ನಮ್ಮ ಹಗೆ ಯಾದ ದುರ್ಯೋಧನನಿಗೆ ನಮಸ್ಕಾರಮಾಡಲಾರರು.

೪೫. ಈ ವೃಷ್ಣಿಗಳಿಗೆ ಸಹಜವಾಗಿ ಮಿತ್ರರಾದವರೂ ಅವರ ಮಾತನ್ನು ಎಂದಿಗೂ ಮೀರದೆ ಅವರ ಮಾತನ್ನು ಕೇಳುವ ದೊರೆಗಳೂ ಅವರ ಪಕ್ಷದ ಇಷ್ಟಾರ್ಥವು ನೆರವೇರಬೇಕೆಂಬ ಉದ್ದೇಶದಿಂದಲೇ ಆ ದುರ್ಯೋಧನನ ಹತ್ತಿರ ಸೇರಿ, ವಿನಯವನ್ನು ತೋರಿಸುತ್ತ, ಹೊತ್ತು ಕಳೆಯುತ್ತಿದ್ದಾರೆ. ಹದಿಮೂರು ವರ್ಷಗಳ ಅವಧಿ ಮುಗಿಯುವುದನ್ನು ಕಾಯುತ್ತಿದ್ದಾರೆ.

೪೬. ಹದಿಮೂರು ವರ್ಷಗಳ ಅವಧಿ ಮುಗಿದ ಮೇಲೆ ನೀನು ದುರ್ಯೋ ಧನನ ಮೇಲೆ ಯುದ್ಧಕ್ಕೆ ಹೊರಡು. ಆ ಕೂಡಲೆ ಈ ವೃಷ್ಣಿರಾಜರುಗಳ ಮನಸ್ಸುಗಳೆಲ್ಲ ಒಡೆದುಹೋಗುತ್ತವೆ. ಸೂರ್ಯನು ಹುಟ್ಟಬಂದಾಗ ಕಮಲಗಳ ಕೊಳದಲ್ಲಿರುವ ಹೂವುಗಳೆಲ್ಲ ಬಿರಿಯುವಂತೆ ದುರ್ಯೋಧನನ ಭಾಗಕ್ಕೆ ಅವರ ಮನಸ್ಸುಗಳು ಮುರಿದುಹೋಗುತ್ತವೆ, ನಿನ್ನ ಪರವಾಗಿ ಅರಳುತ್ತವೆ.

೪೭. ಮದದಿಂದ ಮೈಮರೆತು ಗರ್ವಪಡುತ್ತಿರುವ ಆ ದುರ್ಯೋಧನನು ರಾಜರುಗಳಲ್ಲಿ ಸದಾ ಒಡಕನ್ನು ಉಂಟುಮಾಡಿ ಮೆರೆಯುತ್ತಿದ್ದಾನೆ. ಯಾರಾದರೂ ತಮ್ಮನ್ನು ಅಲಕ್ಷ್ಯವಾಗಿ ಕಂಡರೆ, ಸಾಮಾನ್ಯಜನರು ಕೂಡ ಅದನ್ನು ಸಹಿಸಲಾರರು. ಹಾಗೆಂದ ಮೇಲೆ, ಅತಿಶಯವಾದ ತೇಜಸ್ಸಿರುವ ರಾಜರುಗಳು ಅದನ್ನು ಹೇಗೆ ಸಹಿಸಿಕೊಂಡು ಸುಮ್ಮನಿದ್ದಾರು?

೪೮. ತಮ್ಮ ರಾಜ್ಯಪದವಿ ಭದ್ರವಾಗಿ ಉಳಿಯುವುದಕ್ಕೆ ಏನೇನು ಮಾಡಬೇಕೋ ಅದನ್ನು ಮಾಡದೆ ಇರುವವರು, ಅಭಿವೃದ್ಧಿ ಹೊಂದಿದ ಹಾಗೆಲ್ಲ ಮದದಿಂದ ಉದ್ಧತರಾಗುವರು. ಆ ಔದ್ಧತ್ಯದ ತೀವ್ರತೆಯನ್ನು ಅವನ ವಿನಯವು ತತ್ಕಾಲಕ್ಕೆ ತಡೆದಿರುತ್ತದೆ, ಅಷ್ಟೆ.

೪೯. ಹೀಗೆ ಮದದಿಂದ ಕಣ್ಣುಕಾಣದ ದೊರೆಯು ಸದಾ ಮೂಢನಾಗಿರುವನು. ಅವನ ಮೌಢ್ಯ ಬರಬರುತ್ತ ಹೆಚ್ಚುವುದು. ಆ ಮೌಢ್ಯದಿಂದಲೇ ಅವನು ನೀತಿಮಾರ್ಗವನ್ನು ಬಿಟ್ಟು ಹೋಗುವನು. ನೀತಿಯಿಲ್ಲದ ರಾಜನನ್ನು ಅವನ ಪ್ರಜೆಗಳು ಪ್ರೀತಿಸುವುದಿಲ್ಲ, ದೂರಮಾಡುವರು.

೫೦. ಜನಗಳ ಅನುರಾಗವನ್ನು ಕಳೆದುಕೊಂಡು ಅವರ ಅಪರಾಗಕ್ಕೆ ಪಾತ್ರನಾದ ದೊರೆಯು, ಗಾಳಿ ಬಂದು ಬೀಸಿದಾಗ ಬುಡ ಸಡಿಲವಾಗಿ ಮುರಿದು ಬೀಳುವ ಮರಕ್ಕೆ ಸಮಾನನಾಗುವನು. ಅಂತಹ ಸಮಯದಲ್ಲಿ, ದೊಡ್ಡ ಮರವನ್ನಾದರೂ ಶ್ರಮವಿಲ್ಲದೆ ಸುಖವಾಗಿ ಕಿತ್ತುಹಾಕುವಂತೆ ಶತ್ರುವನ್ನು ನಿರ್ಮೂಲ ಮಾಡಿಬಿಡಬಹುದು. ಇದು ಶಾಂತನೂ ಕ್ಷಮಾಶೀಲನೂ ಆದ ದೊರೆಯಿಂದ ಮಾತ್ರ ಸಾಧ್ಯ.

೫೧. ರಾಜನ ಒಳಜಗತ್ತು ಎನ್ನಬಹುದಾದ ಪರಿವಾರದಲ್ಲಿಯೂ ಪ್ರಜೆಗಳಲ್ಲಿಯೂ ಸ್ವಲ್ಪ ಪ್ರಮಾಣದಲ್ಲಿಯಾದರೂ ವಿರಸ ಒಡಕು ಅಸಮಾಧಾನ ಉಂಟಾದರೂ ಸಾಕು—ಆ ದೊರೆಯನ್ನು ಅಡಗಿಸುವುದಕ್ಕೆ ಅದೇ ಸಮರ್ಥವಾಗುವುದು. ಅದು ಹೇಗೆಂದರೆ—ಮರದಲ್ಲಿ ಕೊಂಬೆಗಳಿಗೂ ಕೊಂಬೆಗಳಿಗೂ ಮಸೆದಾಟವುಂಟಾದರೆ, ಅಲ್ಲಿ ಮೊದಲು ಉತ್ಪತ್ತಿಯಾಗುವುದು ಒಂದೇ ಕಣ ಬೆಂಕಿ. ಆದರೆ ಆ ಕಣವೇ ಮುಂದೆ ದೊಡ್ಡ ಅಗ್ನಿಯಾಗಿ, ಕಾಡು ಮುಚ್ಚಿರುವ ಬೆಟ್ಟವನ್ನೇ ದಹಿಸಿಬಿಡುವುದು.

೫೨. ಶತ್ರುವಾದವನು ವಿನಯ ಕೆಟ್ಟವನಾಗಿದ್ದರೂ, ಅವನಿಗೆ ಅಭ್ಯುದಯ

ಉಂಟಾಗುತ್ತಿದ್ದರೂ, ಜಾಣನಾದವನು ಅದನ್ನು ಗಮನಕ್ಕೆ ತಂದುಕೊಳ್ಳಬಾರದು. ಅಂತಹವನನ್ನು ಗೆಲ್ಲುವುದು ಸುಲಭ. ಏಕೆಂದರೆ, ವಿನಯವನ್ನು ಕೆಡಿಸಿಕೊಂಡು ಸಂಪಾದನೆ ಮಾಡಿದ ಐಶ್ವರ್ಯದ ರಾಶಿಯಿಂದ ಕೊನೆಗೆ ನಿಶ್ಚಯವಾಗಿಯೂ ಆಪತ್ತು ಉಂಟಾಗುತ್ತದೆ.

೫೩. ನದಿಯ ದಡಗಳು ಬಲಹೀನವಾಗಿದ್ದರೆ, ನದಿಯು ಅಸಮಾನವಾದ ವೇಗದಿಂದ ಹರಿಯುತ್ತಿದ್ದರೆ, ಕಾಲಕ್ರಮದಲ್ಲಿ ದಡವನ್ನು ಕೊಚ್ಚಿಹಾಕಿ ತಾನೂ ಚೆಲ್ಲಿಹೋಗುತ್ತದೆ. ಅದರಂತೆಯೇ ರಾಜನಾದವನ ಅಲ್ಪತನದಿಂದ ರಾಜ್ಯದ ಒಳಗೂ ಹೊರಗೂ ಒಡಕುಗಳುಂಟಾದರೆ, ಅಂಥವನ ರಾಜ್ಯವನ್ನು ಹಗೆಗಳು ಬಹು ಶೀಘ್ರದಲ್ಲಿಯೇ ತಾವು ಕಿತ್ತುಕೊಂಡುಬಿಡುವರು.

೫೪. ಕ್ರೋಧದಿಂದ ಮನಸ್ಸು ಕದಡಿಹೋಗಿದ್ದ ಭೀಮನನ್ನು ಸಮಾಧಾನಗೊಳಿಸಬೇಕೆಂದು ಧರ್ಮರಾಯನು ಶಾಂತವಾದ ಮಾರ್ಗದ ಪ್ರಯೋಜನಗಳನ್ನು ಭೀಮನಿಗೆ ವಿವರಿಸಿ ಹೇಳುತ್ತಿದ್ದನು. ಅಷ್ಟು ಹೊತ್ತಿಗೆ ಸರಿಯಾಗಿ, ಬಯಸುತ್ತಿದ್ದ ಇಷ್ಟಾರ್ಥ ತಾನಾಗಿಯೇ ಕೈಗೆ ಬಂದು ಸೇರಿದ ಹಾಗೆ, ಪರಾಶರನ ಮಗನಾದ ವ್ಯಾಸಮಹರ್ಷಿಯು ಅಲ್ಲಿಗೆ ಬಂದನು.

೫೫. ಆ ವ್ಯಾಸನು ಎಂಥವನು? ಆತನ ಮಧುರವಾದ ನೋಟದಿಂದ ಕಾಡಿನ ಮೂಕಪ್ರಾಣಿಗಳಿಗೂ ಶಾಂತಿಯುಂಟಾಗಿ, ಅವುಗಳ ಭ್ರಾಂತಿ ನಾಶವಾಗುವುದು. (ಎಂದ ಮೇಲೆ, ಆತನ ಪ್ರಭಾವ ಭೀಮನ ಮೇಲೆಯೂ ಬೀಳದೆ ಇರಲು ಸಾಧ್ಯವೆ?) ಆತನ ದೇಹಕಾಂತಿಯು ದರ್ಶನಮಾಡಿದವರ ಪಾಪವನ್ನು ನಾಶಮಾಡಿ, ಅವರಿಗೆ ತಂಪನ್ನು ತಂದುಕೊಟ್ಟು, ಅವರ ಕಣ್ಣುಗಳಿಗೆ ಹಿತವನ್ನು ಉಂಟುಮಾಡುವುದು.

೫೬. ವ್ಯಾಸಮುನಿಯು ಎಲ್ಲ ಪ್ರಕಾರವಾದ ತಪಸ್ಸುಗಳನ್ನೂ ಮಾಡಿದವನು. ಎಲ್ಲ ರೀತಿಯ ಕೇಡುಗಳನ್ನೂ ನಾಶಮಾಡಿದವನು, ನಾಶಮಾಡುವ ಸಾಮರ್ಥ್ಯವುಳ್ಳವನು. ಪುಣ್ಯವೇ ಮನುಷ್ಯರೂಪ ತಾಳಿಬಂದಂತಿರುವವನು. ಈಗ, ಇದ್ದಕ್ಕಿದ್ದಂತೆ, ಪಾಂಡವರು ಆತನನ್ನು ಕರೆಯಿಸದೆ, ತಾನು ಬರುತ್ತೇನೆಂದು ಮೊದಲೇ ತಿಳಿಸದೆ, ಅಲ್ಲಿಗೆ ಬಂದನು. ಧರ್ಮರಾಯನು ಆಶ್ಚರ್ಯದಿಂದ ಆತನನ್ನು ಕಂಡು, ಆದರದಿಂದ ಬರಮಾಡಿಕೊಂಡನು.

೫೭. ಧರ್ಮರಾಯನು ತಾನು ಕುಳಿತಿದ್ದ ಎತ್ತರವಾದ ಪೀಠದಿಂದ ಎದ್ದು ಬಂದನು. ಆತನು ಉಟ್ಟಿದ್ದ ಕೆಂಪು ಬಣ್ಣದ ನಾರುಮಡಿಯ ಸೆರಗು ಅಲುಗಾಡುತ್ತಿತ್ತು. ಆತನನ್ನು ನೋಡಿದರೆ—ಮೇರುಪರ್ವತದ ಕೋಡಿಸಿಂದ ಕೆಂಪು ಬಣ್ಣದ ಕಿರಣಗಳನ್ನು ಚೆಲ್ಲುತ್ತ ಬರುವ ಸೂರ್ಯನ ಹಾಗಿದ್ದನು.

೫೮. ಮುನಿಗಳಿಗೆ ಯಾವ ರೀತಿ ಪೂಜೆ ಸಲ್ಲಿಸಬೇಕೋ ಹಾಗೆ, ಹಿರಿಯರು ಇಂತಹ ಸಂದರ್ಭಗಳಲ್ಲಿ ಯಾವ ಕ್ರಮ ಅನುಸರಿಸುವರೋ ಅದರಂತೆ, ಧರ್ಮರಾಯನು ವ್ಯಾಸನಿಗೆ ಭಕ್ತಿಯಿಂದ ಪೂಜೆಯನ್ನು ಅರ್ಪಿಸಿದನು. ಅನಂತರ, ಮುನಿಶ್ರೇಷ್ಠನ ಅಪ್ಪಣೆಯನ್ನು ಪಡೆದು, ಪೀಠವನ್ನು ಪುನಃ ಏರಿ ಕುಳಿತನು. ಕಲಿತಿರುವ ವಿದ್ಯೆಗೆ ಶಾಂತಿಯಿಂದ ಹೇಗೆ ಕಾಂತಿ ಕೂಡುವುದೋ ಹಾಗೆ ಧರ್ಮರಾಜನು ಹತ್ತಿ ಕುಳಿತದ್ದರಿಂದ ಆ ಪೀಠಕ್ಕೆ ಕಾಂತಿ ಬಂದಿತು.

೫೯. ವ್ಯಾಸನು ಬಂದನೆಂಬ ಸಂತೋಷದಿಂದ ಧರ್ಮರಾಯನ ತುಟಿಗಳ ಮೇಲೆ ಮೃದುವಾದ ನಗುವಿನ ಕಿರಣಗಳು ಬೆಳಗಿದವು. ತೇಜಸ್ಸನ್ನು ಎಲ್ಲ ಕಡೆಗೂ ಪಸರಿಸುವ ಆ ಮುನಿಯ ಮುಂದುಗಡೆ ಧರ್ಮರಾಯನು ಕುಳಿತಿದ್ದರೆ —ತಳತಳಿಸಿ ಹೊಳೆಯುವ ಗುರುವಿಗೆ ಎದುರಾಗಿ ಬಂದ ಪೂರ್ಣಚಂದ್ರನ ಕಳೆಯನ್ನು ಅವನು ಹೊಂದಿದ ಹಾಗಿತ್ತು.

## ಗಮನಿಸಿ

ಭೀಮನು ವಾದ ಮಾಡುವ ಸರಣಿಯನ್ನೂ ಅದನ್ನು ಒಪ್ಪದಿರುವುದಕ್ಕೆ ಧರ್ಮರಾಜನು ಕೊಡುವ ಕಾರಣಗಳನ್ನೂ ಗಮನಿಸಿ. ಧರ್ಮರಾಜನು ಭೀಮನನ್ನು ವಿರೋಧಿಸಿದರೂ ಆ ವಿರೋಧವು ನಯಶೀಲವಾದದ್ದು ಎಂಬುದನ್ನು ಗಮನಿಸಿ. ಧರ್ಮರಾಜನನ್ನು ಭೀಮನು ಎಷ್ಟು ಅರ್ಥಮಾಡಿಕೊಂಡಿದ್ದಾನೋ ಅದಕ್ಕಿಂತ ಹೆಚ್ಚಾಗಿ ಧರ್ಮರಾಜನು ಭೀಮನನ್ನು ಅರ್ಥಮಾಡಿಕೊಂಡಿದ್ದಾನೆ ಎಂಬುದನ್ನು ಗಮನಿಸಿ. ಒಂದನೆಯ ಎರಡನೆಯ ಸರ್ಗಗಳನ್ನು ಒಟ್ಟಿಗೆ ತೆಗೆದುಕೊಂಡು, ದ್ರೌಪದಿಗೂ ಭೀಮನಿಗೂ ಇರುವ ಸಮಾನಧರ್ಮವನ್ನೂ ಭೀಮನಿಗೂ ಧರ್ಮರಾಜನಿಗೂ ಇರುವ ಭಿನ್ನದೃಷ್ಟಿಯನ್ನೂ ಗಮನಿಸಿ. ರಾಜರ ಬಳಿ ಚಾರರೂ ಆಪ್ತರೂ ವರ್ತಿಸುವ ಔಚಿತ್ಯವನ್ನು ಗಮನಿಸಿ. 'ಕ್ಷಮೆಯೇ ವೀರರ ಲಕ್ಷಣ' ಎಂಬುದು ಧರ್ಮರಾಜನಿಗೆ ಎಷ್ಟು ಒಪ್ಪುತ್ತದೆ, ಗಮನಿಸಿ.

## ಮೂರನೆಯ ಸರ್ಗ

೧. ಶರತ್ಕಾಲದ ಚಂದ್ರನ ಕಿರಣಗಳಂತೆ ಮನೋಹರವಾದ ಕಾಂತಿಯಿಂದ ವ್ಯಾಸನ ದೇಹವು ಎತ್ತರವಾಗಿ ಕಾಣುತ್ತಿತ್ತು. ಆತನ ನೀಲಿಯ ಬಣ್ಣದ ಶರೀರದ ಮೇಲುಗಡೆ ಹೊಳೆಯುತ್ತಿದ್ದ ಕೆಂಪಾದ ಜಟೆಯನ್ನು ನೋಡಿದರೆ, ಮೋಡದ ಮೇಲುಗಡೆ ಮಿಂಚು ಹೊಳೆಯುತ್ತಿದ್ದಹಾಗಿತ್ತು.

೨. ಆತನ ಆಕಾರವು ಅತ್ಯಂತ ಸೌಮ್ಯವಾಗಿತ್ತು, ಕಣ್ಣಿಗೆ ಸೊಗಸಾಗಿತ್ತು. ಆತನ ದೇಹಕಾಂತಿಯನ್ನು ಮೀರಿಸುವ ದೇಹಕಾಂತಿ ಲೋಕದಲ್ಲಿ ಯಾರಿಗೂ ಇರಲಿಲ್ಲ. ಆತನನ್ನು ಅದುವರೆಗೆ ನೋಡದೆ ಇದ್ದ ಅಪರಿಚಿತರಿಗು ಕೂಡ ನೋಡಿದೊಡನೆಯೆ ಮನಸ್ಸಿನಲ್ಲಿ ಪ್ರೀತಿರಸ ಹುಟ್ಟುತ್ತಿತ್ತು.

೩. ಆತನ ಮುಖದಲ್ಲಿಯೂ ಅಂಗಾಂಗಗಳಲ್ಲಿಯೂ ಶಾಂತಿ ತುಂಬಿದ್ದುದಷ್ಟೇ ಅಲ್ಲ; ಆತನ ಹೃದಯದಲ್ಲಿಯೂ ಶಾಂತಿ ತುಂಬಿದ್ದು, ಮೊದಲು ಹೃದಯದಲ್ಲಿ ಹುಟ್ಟಿ ತುಂಬಿದ ಶಾಂತಿಯೇ ಉಕ್ಕಿ ಅಂಗಾಂಗಗಳಲ್ಲಿ ಹರಡಿಕೊಂಡು ತೋರುತ್ತಿತ್ತು. ಆತನು ಯಾರನ್ನೂ ಬಾಯಿತೆರೆದು ಮಾತನಾಡಿಸಬೇಕಾಗಿಯೇ ಇರಲಿಲ್ಲ; ಆತನ ಮೃದುವಾದ ಕಣ್ಣುಗಳ ಕಾಂತಿಯಲ್ಲಿ ಸವಿಯೂ ಪ್ರೀತಿಯೂ ವ್ಯಕ್ತಪಡುತ್ತಿದ್ದವು.

೪. ಚತುರ್ಮುಖ ಬ್ರಹ್ಮನ ಮುಖಗಳಿಂದ ಹುಟ್ಟಿದ ವೇದಗಳು ಲೋಕದ ಪಾಪವನ್ನು ನಾಶಮಾಡುತ್ತವೆ, ಲೋಕಕ್ಕೆ ಧರ್ಮವನ್ನು ನಿಯಮಿಸುತ್ತವೆ. ಅಂತಹ ಪರಮೋತ್ತಮವಾದ ವೇದಗಳನ್ನು ಸಂಗ್ರಹಿಸಿ ಕ್ರೋಢೀಕರಿಸಿದಾತ ಭಗವಾನ್ ವ್ಯಾಸಋಷಿ. ಬ್ರಹ್ಮನು ವೇದಗಳನ್ನು ಪಡೆದ ತಂದೆಯಾದರೆ ವ್ಯಾಸನು ವೇದಗಳನ್ನು ಪೋಷಿಸಿದ ತಂದೆ. ಇಂತಹ ವ್ಯಾಸನು ಧರ್ಮರಾಜನ ಬಳಿಗೆ ಬಂದು, ಸುಖವಾಗಿ ಕುಳಿತುಕೊಂಡಾದ ಮೇಲೆ, ಆತನು ಬಂದ ಕಾರಣ ವೇನೆಂದು ಧರ್ಮರಾಜನು ಆತನನ್ನು ಪ್ರಶ್ನಿಸಿದನು. ಧರ್ಮರಾಜನು ಹೇಳಿದನು:

೫. ತಮ್ಮಂಥವರ ದರ್ಶನವಾಗಬೇಕಾದರೆ ಅದಕ್ಕೆ ಹಿಂದೆ ಪುಣ್ಯವನ್ನು ಮಾಡಿ ಕೂಡಿಟ್ಟಿರಬೇಕು. ರಜೋಗುಣವಿಲ್ಲದೆ ಕೆಲಸಮಾಡಿದರೆ ಮಾತ್ರ ತಮ್ಮಂಥವರ ದರ್ಶನಫಲ ದೊರಕುತ್ತದೆ. ತಮ್ಮಂಥವರ ದರ್ಶನವಾದದ್ದು ಅನಿರೀಕ್ಷಿತವಾಗಿ, ಮೋಡವೆ ಕಾಣಿಸಿಕೊಳ್ಳದ ವೇಳೆಯಲ್ಲಿ, ಮಳೆ ಬಂದುದಕ್ಕಿಂತ ಅಧಿಕ. ಮಳೆ ಬಂದದ್ದರಿಂದ ಭೂಮಿಯ ರಜೋಗುಣ (ಎಂದರೆ ದೂಳು

ಏಳುವ ಗುಣ) ಹೇಗೆ ಅಡಗಿಹೋಗುತ್ತದೋ ಹಾಗೆ ತಮ್ಮ ಆಗಮನದಿಂದ ನಮ್ಮ ಭೀಮನ, ದ್ರೌಪದಿಯ ಕೋಪತಾಪಗಳು ಬಹುಮಟ್ಟಿಗೆ ಕಡಮೆಯಾಗಬಹುದು.

೬. ಇಂದು ತಾವು ನಮ್ಮ ಬಳಿಗೆ ಬಂದದ್ದು ಹಿಂದೆ ನಾವು ಮಾಡಿದ ಯಜ್ಞಯಾಗಾದಿಗಳ ಫಲ. ನಾವು ಮಾಡಿದ ಧರ್ಮಕಾರ್ಯಗಳಿಗಾಗಿ ಬ್ರಾಹ್ಮಣರು ನಮಗೆ ಆಶೀರ್ವಾದ ಮಾಡಿದ್ದರ ಫಲ—ಇಂದು ನಮಗೆ ಲಭಿಸಿದ ತಮ್ಮ ಆಗಮನ. ತಾವು ನಮ್ಮ ಬಳಿಗೆ ದಯಮಾಡಿಸಿದ್ದರಿಂದ ಮೂರು ಲೋಕದವರ ಕಣ್ಣಿಗೂ ನಾವು ಗಣ್ಯರಾದೆವು, ನಮಗೆ ಶಾಶ್ವತವಾದ ಗೌರವ ದೊರೆಕೊಂಡಿತು.

೭. ತಾವು ಸಾಕ್ಷಾತ್ ಬ್ರಹ್ಮನಿಗೆ ಸಮಾನರಾದವರು, ಸರ್ವಸಮರ್ಥರಾದವರು. ನಮ್ಮ ಪಾಲಿಗೆ ತಮಗಿಂತ ದೊಡ್ಡವರು ಯಾರೂ ಇಲ್ಲ. ತಮ್ಮಂಥವರ ದರ್ಶನ ವ್ಯರ್ಥವಾಗದು. ಅದು ಸರ್ವ ಇಷ್ಟಾರ್ಥಗಳನ್ನೂ ಸಾಧಿಸಿಕೊಡುತ್ತದೆ; ಬೇಕುಬೇಕಾದ ಐಶ್ವರ್ಯಗಳನ್ನು ಎಳೆದು ತಂದು ಕೊಡುತ್ತದೆ, ಪಾಪಗಳನ್ನು ಧ್ವಂಸ ಮಾಡುತ್ತದೆ, ಮಂಗಳಗಳನ್ನು ಉಂಟುಮಾಡುತ್ತದೆ, ಯಶಸ್ಸನ್ನು ಹೆಚ್ಚಿಸುತ್ತದೆ.

೮. ಬೆಳುದಿಂಗಳನ್ನು ಧಾರಾಕಾರವಾಗಿ ಸುರಿಸುವ ಚಂದ್ರನನ್ನು ನೋಡಿದರೂ ತಂಪನ್ನು ಪಡೆಯದಿದ್ದ ನನ್ನ ಕಣ್ಣುಗಳಿಗೆ ತಮ್ಮ ದರ್ಶನ ತಂಪನ್ನು ಉಂಟುಮಾಡಿದೆ. ಬಂಧುಗಳನ್ನೆಲ್ಲ ಬಿಟ್ಟುಬಂದು ಕಾಡಿನಲ್ಲಿ ಒಂಟಿಗರಾಗಿದ್ದೇವೆಯಲ್ಲಾ ಎಂಬ ಬೇಸರವನ್ನು ತಮ್ಮ ದರ್ಶನದಿಂದ ಕಳೆದುಕೊಂಡಿದ್ದೇವೆ. ಅಷ್ಟೇ ಅಲ್ಲ, ತಮ್ಮ ಆಗಮನದಿಂದ ನಮಗೆ ತುಂಬ ಹರ್ಷವುಂಟಾಗಿದೆ.

೯. 'ತಾವು ಇಷ್ಟು ದೂರ ನಮ್ಮ ಬಳಿಗೆ ಬಂದುದಕ್ಕೆ ಕಾರಣವೇನು?' ಎಂಬ ಪ್ರಶ್ನೆಯನ್ನು ನಾವು ಕೇಳಿದರೆ, ಅದು ಅನುಚಿತವೆನಿಸುತ್ತದೆ. ಯಾವ ರೀತಿಯಾದ ಆಸೆಗಳೂ ಇಲ್ಲದ ತಮಗೆ ನಮ್ಮಿಂದ ಆಗಬೇಕಾದ್ದು ತಾನೆ ಏನು? ಅಥವಾ ತಮ್ಮಂಥವರಿಗೆ ಕೊಡಬಹುದಾದದ್ದು ತಾನೆ ನಮ್ಮಲ್ಲಿ ಏನುಂಟು? ಆದರೂ, ನಾವು ಹೀಗೆ ಏನಾದರೂ ಪ್ರಶ್ನೆಮಾಡಿದರೆ, ಆ ನೆಪದಲ್ಲಿ ತಾವು ಉತ್ತರ ಕೊಡುವಾಗ ತಮ್ಮ ಮಂಗಳವಾದ ಧ್ವನಿಯನ್ನು ಕೇಳಿ ಸವಿಯೋಣವೆಂಬ ಆಸೆಯಿಂದ ಹೀಗೆ ಮಾತನಾಡುತ್ತಿದ್ದೇನೆ.

೧೦. ಧರ್ಮರಾಜನು ಹೀಗೆ ಯುಕ್ತವಾದ ಒಳ್ಳೆಯ ಮಾತುಗಳನ್ನು ಆಡಿದನು. ಕೌರವನ ಕೈಗೆ ಹೋಗಿದ್ದ ರಾಜ್ಯವನ್ನು ತಾನು ಪುನಃ ಸಂಪಾದಿಸಬೇಕೆಂದು ಆತನ ಮನಸ್ಸಿನಲ್ಲಿತ್ತು. ಕ್ಷತ್ರಿಯನಾದವನಿಗೆ ಈ ರೀತಿಯ ವಿಜಯಾಕಾಂಕ್ಷೆ ಇರಬೇಕಾದ್ದು ಸಹಜ. ಧರ್ಮರಾಜನ ಕ್ಷತ್ರಿಯೋಚಿತವಾದ ಉನ್ನತ ಮನೋಧರ್ಮವನ್ನು ಕಂಡು, ವ್ಯಾಸನು ಆತನಿಗೆ ಹೀಗೆ ಉತ್ತರ ಹೇಳಿದನು:

೧೧. ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಹೆಸರನ್ನೂ ತಪಸ್ಸಿನ ಧನವನ್ನೂ ಸಂಪಾದಿಸಬೇಕೆಂದು ಬಯಸುವ ನಮ್ಮಂಥ ಮುನಿಗಳಿಗೆ ಯಾರ ವಿಷಯದಲ್ಲಿಯೂ ಭೇದಭಾವಗಳಿರಬಾರದು. ಅದರಲ್ಲಿಯೂ ನಂಟರಾದವರು ಎಲ್ಲರ ವಿಷಯದಲ್ಲಿಯೂ ಒಂದೇ ಪ್ರಕಾರವಾಗಿ ನಡೆದುಕೊಳ್ಳುವ ಮನಸ್ಸು ನಮಗೆ ಇರಬೇಕಾದ್ದು ಸಹಜ.

೧೨. ಆದರೆ, ಕೌರವರಿಗಿಂತ ನೀನು ಹೆಚ್ಚು ಗುಣಶಾಲಿಯಾಗಿರುವ ಕಾರಣದಿಂದ ನನ್ನ ಮನಸ್ಸು ನಿನಗೆ ಸೋತು ನಿನ್ನ ವಶವಾಗಿದೆ. ನನ್ನಂಥ ಮುನಿಗಳಿಗೆ ಯಾವ ಆಸೆಯಿಲ್ಲವೆಂಬುದೂ, ನಾವು ಮೋಕ್ಷವೊಂದನ್ನೇ ಅಪೇಕ್ಷಿಸುವರೆಂಬುದೂ ನಿಜ. ಆದರೂ ಲೌಕಿಕವಾದ ಯಾವ ಬಂಧನಗಳಿಗೂ ನಾವು ಸಿಕ್ಕಬಾರದಾದರೂ, ಸತ್ಪುರುಷರ ಪಕ್ಷವು ನಮ್ಮನ್ನು ತನ್ನ ಕಡೆಗೆ ಎಳೆದುಕೊಳ್ಳುತ್ತದೆ.

೧೩. ಧೃತರಾಷ್ಟ್ರನಿಗೆ ಕೌರವರು ಹೇಗೆ ಮಕ್ಕಳೋ ಹಾಗೆಯೇ ನೀವೂ ಅವನಿಗೆ ಮಕ್ಕಳೇ. ಅಷ್ಟೇ ಅಲ್ಲ, ಆ ಕೌರವನಿಗಿಂತ ನೀವು ಹೆಚ್ಚು ಗುಣಶಾಲಿಗಳು. ಹೀಗಿರುವಾಗ, ನಿಮ್ಮನ್ನು ಕೈಬಿಡಲು ಆತನಿಗೆ ಹೇಗೆ ತಾನೆ ಮನಸ್ಸು ಬಂತು? ಅಥವಾ, ಹಾಗೆ ಮನಸ್ಸು ಬಂದದ್ದು ತಾನೆ ಏನಾಶ್ಚರ್ಯ? ಏಕೆಂದರೆ, ಇವರು ನನ್ನ ಮಕ್ಕಳು, ಇದು ನನ್ನ ರಾಜ್ಯ ಎಂಬ ಆಸೆ ಬಲವಾದರೆ, ಅದರಿಂದ ಮೋಹ ಉಂಟಾಗುತ್ತದೆ; ಅದರಿಂದ ತಾರತಮ್ಯಜ್ಞಾನ ನಷ್ಟವಾಗುತ್ತದೆ.

೧೪. ಯುಕ್ತಾಯುಕ್ತಪರಿಜ್ಞಾನವಿಲ್ಲದ ಆ ಧೃತರಾಷ್ಟ್ರನು ಹಾಗಿರಲಿ. ದುರ್ಯೋಧನನಾದರೂ ತಾನು ಮೋಸದಿಂದ ಸಂಪಾದಿಸಿದ ನಿನ್ನ ರಾಜ್ಯವನ್ನು ಹೇಗೆ ದಕ್ಕಿಸಿಕೊಂಡಾನು? ಅವನಿಗೆ ಮಂತ್ರಾಲೋಚನೆ ಕೊಡುವವರು ಕರ್ಣ, ದುಶ್ಶಾಸನ, ಶಕುನಿ ಮುಂತಾದವರು. ದುಷ್ಟರಾದ ಅವರ ಮಾತನ್ನು ನಂಬಿಕೊಂಡವನು ಏನು ಸಾಧಿಸಿಯಾನು? ಏಕೆಂದರೆ, ಕೆಟ್ಟ ಜನಗಳ ಜೊತೆ ಸೇರುವು

ದರಿಂದ ಹಿಡಿದ ಕೆಲಸಕ್ಕೆ ಅನೇಕ ವಿಘ್ನಗಳು ಒದಗುತ್ತವೆ; ಆ ಕೆಟ್ಟಸಹವಾಸವು ಕೇಡಿನ ಮೇಲೆ ಕೇಡನ್ನು ಸುಲಭವಾಗಿ ಉಂಟುಮಾಡುತ್ತದೆ.

೧೫. ನಿಮ್ಮ ಶತ್ರುವಾದ ದುರ್ಯೋಧನನು ಧರ್ಮದ ದಾರಿಯನ್ನು ಬಿಟ್ಟು ನಿಮಗೆ ಮೋಸದಿಂದ ಅನ್ಯಾಯವನ್ನು ಮಾಡಿರುವನಾದರೂ, ನೀನು ಮಾತ್ರ ಧರ್ಮವನ್ನು ಬಿಡದೆ ಮೊದಲಿನಿಂದಲೂ ನ್ಯಾಯವಾಗಿಯೇ ನಡೆದಿರುವೆ. ಕಾರಣಾಂತರಗಳಿಂದ ತಾತ್ಕಾಲಿಕವಾದ ದುರವಸ್ಥೆ ನಿನಗೆ ಬಂದಿರುವುದಾದರೂ ಶಾಶ್ವತವಾದ ದುಃಸ್ಥಿತಿಗೆ ಸಿಕ್ಕಿಕೊಳ್ಳದ ಹಾಗೆ ನೀನು ಸದ್ಗುಣಿಯಾಗಿ ಬದುಕುತ್ತಿದ್ದೀಯೆ.

೧೬. ಏನೇನು ಅನ್ಯಾಯ ಮಾಡಿದರೂ ಕೋಪಮಾಡಿಕೊಳ್ಳದೆ ಶಾಂತನಾಗಿ ಇರುವವನು ನೀನು. ಇಂತಹ ನಿನಗೆ ಕೌರವರು ಮೋಸ ಮಾಡಿ, ನಿನ್ನ ಮನಸ್ಸು ನೋಯಿಸಿದರು. ಅದರಿಂದ ನಿನಗೆ ಅವರು ಅಹಿತವನ್ನು ಮಾಡಿದರೆಂದು ತೋರಬಹುದಾದರೂ, ನಿಜವಾಗಿ ಅವರು ತಾವೇ ತಮ್ಮ ಹಿತವನ್ನು ಹಾಳು ಮಾಡಿಕೊಂಡರು. ನಿನ್ನಂತಹ ಸತ್ಪುರುಷನ ಸ್ನೇಹವನ್ನು ಸಂಪಾದಿಸಿಕೊಂಡಿದ್ದರೆ ಅವರಿಗೆ ಎಷ್ಟು ಮೇಲ್ಮೆಯುಂಟಾಗುತ್ತಿತ್ತು? ಆದರೂ ನಿನ್ನ ಶತ್ರುಗಳು ನಿನಗೆ ಮಾಡಿದ ಅನ್ಯಾಯದಿಂದ ನಿನಗೆ ಉಪಕಾರವೇ ಆಯಿತು. ಹೇಗೆಂದರೆ— ಅವರು ಕೊಟ್ಟ ಕೋಟಲೆಗಳನ್ನೆಲ್ಲ ಸಹಿಸಿಕೊಂಡದ್ದರಿಂದ ನೀನು ಎಂತಹ ಸಂಯಮಿ, ಎಂತಹ ಕ್ಷಮಾವೀರ ಎಂಬುದು ಲೋಕಕ್ಕೆ ಪ್ರಕಟವಾಯಿತು.

೧೭. ಯುಧಿಷ್ಠಿರ, ನೀನು ನಿನ್ನ ಪರಾಕ್ರಮದಿಂದ ಭೂಮಿಯನ್ನು ಗೆದ್ದುಕೊಳ್ಳಬಲ್ಲೆ. ಆದರೆ, ನಿನ್ನ ಶತ್ರುಗಳಿಗಾದರೋ ನಿನಗಿಂತ ಹೆಚ್ಚಾದ ಆಯುಧಗಳ ಸಂಪತ್ತಿದೆ. ಆದ್ದರಿಂದ, ನೀನು ಅವರಿಗಿಂತ ಹೆಚ್ಚಿನ ಆಯುಧಗಳನ್ನು ಸಂಪಾದಿಸಿ, ಅವರನ್ನು ಮೀರಿಸಬೇಕು. ಏಕೆಂದರೆ, ಯುದ್ಧದಲ್ಲಿ ಜಯಶ್ರೀ ಲಭಿಸುವುದು ಉತ್ತಮನಾದವನಿಗೆ ಮಾತ್ರ.

೧೮. ದುರ್ಯೋಧನನ ಪಕ್ಷದಲ್ಲಿ ಎಂತೆಂತಹ ವೀರರಿದ್ದಾರೆ, ಜ್ಞಾಪಿಸಿಕೊ. ಭೀಷ್ಮನು ಪರಶುರಾಮನ ಶಿಷ್ಯನು. ಆ ಪರಶುರಾಮನಾದರೋ ಇಪ್ಪತ್ತೊಂದು ಸಲ ಕ್ಷತ್ರಿಯರನ್ನೆಲ್ಲ ಸಂಹಾರ ಮಾಡಿದಂತಹ ಪರಾಕ್ರಮಿ. ಆದರೂ, ಅಂಬೆಯ ಪ್ರಕರಣದಲ್ಲಿ ಭೀಷ್ಮನಿಗೂ ಪರಶುರಾಮನಿಗೂ ಕಾಳಗ ನಡೆದಾಗ, ಶಿಷ್ಯನು

ತನ್ನ ಗುರುವನ್ನೇ ಸೋಲಿಸಿದನು. ಪರಶುರಾಮುನನ್ನು ಮೀರಿಸಿದವನು ಭೀಷ್ಮನು ಎಂಬುದಕ್ಕೆ ಹಿಂದೆ ನಡೆದ ಈ ಸಂಗತಿಯು ಆಧಾರವುಂಟು.

೧೯. ಈ ಭೀಷ್ಮನು ಇಚ್ಛಾಮರಣಿ, ತನಗೆ ಇಷ್ಟ ಬಂದ ವೇಳೆಯಲ್ಲಿ ತಾನು ದೇಹತ್ಯಾಗ ಮಾಡಬಲ್ಲನೇ ಹೊರತು ಮೃತ್ಯು ಇವನನ್ನು ತಾನಾಗಿ ಮುಟ್ಟ ಲಾರನು. ಯಮ ಕೂಡ ಇವನಿಗೆ ಸೋತ ಹಾಗೆ ಆಗಿದ್ದಾನೆ. ಇಂತಹ ಶತ್ರು ಭಯಂಕರನಾದ ಭೀಷ್ಮನು ಬಿಲ್ಲು ಹಿಡಿದು ಯುದ್ಧದಲ್ಲಿ ಎದುರಿಗೆ ನಿಂತರೆ, ಅವನ ಉಗ್ರತೆಯನ್ನು ಕಂಡು ಯಾರಿಗೆ ತಾನೆ ಅಂಜಿಕೆಯಾಗದು?

೨೦. ಶತ್ರುಪಕ್ಷದಲ್ಲಿರುವ ಇನ್ನೊಬ್ಬ ವೀರನೆಂದರೆ ದ್ರೋಣ. ಯುದ್ಧದಲ್ಲಿ ದ್ರೋಣನು ಬಿಲ್ಲು ಹಿಡಿದು ನಿಂತು, ಬಾಣದ ಮೇಲೆ ಬಾಣಗಳನ್ನು ಎಸೆಯುತ್ತಿರ ಬೇಕಾದರೆ, ಅವನ ಪ್ರಹಾರಗಳನ್ನು ತಡೆಯಬಲ್ಲವರಾರು? ಕೋಪದಿಂದ ಉಜ್ಜ್ವಲನಾದ ದ್ರೋಣನೆಂದರೆ, ಪ್ರಳಯಕಾಲದ ಬೆಂಕಿ ತಾನು ಹತ್ತಿ ಉರಿದು ತನ್ನ ದೊಡ್ಡ ಉರಿಯ ನಾಲಗೆಯನ್ನು ಚಾಚಿದ ಹಾಗೆ!

೨೧. ಕರ್ಣನಾದರೂ ಸಾಮಾನ್ಯನಲ್ಲ. ಅವನು ಸಾಕ್ಷಾತ್ ಪರಶುರಾಮನ ಶಿಷ್ಯನು. ಅವನ ಪರಾಕ್ರಮದ ಮುಂದೆ ಎಂಥವರ ಧೈರ್ಯವಾದರೂ ಕರಗಿ ಹೋಗುವುದು. ಯುದ್ಧದಲ್ಲಿ ಅವನು ಬಿಲ್ಲು ಒದರಿ ನಿಂತರೆ, ಮೃತ್ಯುವಿಗೆ ಕೂಡ ತಾನು ಅದುವರೆಗೂ ಅರಿಯದಿದ್ದಂತಹ ಭಯವುಂಟಾಗುವುದು.

೨೨. ಎದುರು ಪಕ್ಷದಲ್ಲಿ ಇಂತಹ ಅಪ್ರತಿಮವೀರರುಗಳು ಇದ್ದರೂ, ಹನು ಮಂತನನ್ನು ತನ್ನ ಬಾವುಟದಲ್ಲಿ ಚಿಹ್ನವನ್ನಾಗಿ ಉಳ್ಳ ಅರ್ಜುನನು ಅವರನ್ನು ಗೆಲ್ಲಬಲ್ಲನು. ಅದಕ್ಕೆ ಬೇಕಾದ ರಹಸ್ಯವಿದ್ಯೆಯನ್ನು ಅವನಿಗೆ ಕೊಡುತ್ತೇನೆ. ಅತ್ಯಂತ ಕಠಿಣವಾದ ತಪಸ್ಸನ್ನು ಆಚರಿಸಿ, ದೇವತೆಗಳಿಂದ ಆಯುಧಗಳನ್ನು ಸಂಪಾದಿಸಲಿ, ಅವುಗಳನ್ನು ಉಪಯೋಗಿಸುವುದಕ್ಕೆ ಬೇಕಾದ ಸಾಮರ್ಥ್ಯವನ್ನೂ ಸಂಪಾದಿಸಲಿ. ಆ ಸಾಮರ್ಥ್ಯವನ್ನು ಪಡೆಯುವುದು ಎಲ್ಲರಿಗೂ ಸಾಧ್ಯವಲ್ಲ.

೨೩. ಈ ರೀತಿಯ ಸಾಮರ್ಥ್ಯವನ್ನು ಪಡೆಯುವುದಕ್ಕೂ ಮಹಾದೇವತೆ ಗಳನ್ನು ಒಲಿಸಿಕೊಳ್ಳುವುದಕ್ಕೂ ಅನುಕೂಲವಾಗುವ ಮಹಿಮೆಯ ಮಂತ್ರ ಗಳನ್ನು ನಿನಗೆ ತಿಳಿಸುವುಧಕ್ಕಾಗಿ ನಾನು ಇಲ್ಲಿಗೆ ಬಂದಿದ್ದೇನೆ. ಇಂತಹ ಮಂತ್ರ ಗಳನ್ನು ದಾನವಾಗಿ ಪಡೆಯುವ ಯೋಗ್ಯತೆಯುಳ್ಳವನು ನೀನು. ನಿನಗೆ ನಾನು ಈ ಮಂತ್ರವನ್ನು ಕೊಟ್ಟೆನೆಂದರೆ, ನೀವು ದೇವತೆಗಳಿಂದ ವರ ಪಡೆದ ಹಾಗೆಯೇ!

ಯುದ್ಧದಲ್ಲಿ ಶತ್ರುಗಳನ್ನು ಸೋಲಿಸಿ ನಿಮ್ಮ ರಾಜ್ಯಶ್ರೀಯನ್ನು ವಶಪಡಿಸಿಕೊಂಡ ಹಾಗೆಯೇ! ಆದ್ದರಿಂದ ಇದೋ ಈ ಮಂತ್ರವನ್ನು ಸ್ವೀಕರಿಸು.

೨೪. ವ್ಯಾಸನು ಹೀಗೆಂದನು. ಆತನ ಮನಸ್ಸಿನ ಅಭಿಪ್ರಾಯವನ್ನು ತಿಳಿದು, ಆತನಿಂದ ಆ ಮಂತ್ರವನ್ನು ಸ್ವೀಕರಿಸುವಂತೆ ಧರ್ಮರಾಯನು ಅರ್ಜುನನಿಗೆ ಆಜ್ಞೆ ಮಾಡಿದನು. ಅದರಂತೆ ಅರ್ಜುನನು ಗುರುವಿನ ಬಳಿಗೆ ಬರುವ ವಿನಯ ಶಾಲಿಯಾದ ಶಿಷ್ಯನಂತೆ ವ್ಯಾಸನ ಬಳಿಗೆ ಬಂದನು. ಇಂತಹ ಸಚ್ಛಿಷ್ಯನಿಗೆ ಸದುಪದೇಶವನ್ನು ಮಾಡುವುದು ಸಾರ್ಥಕವಾಯಿತೆಂದು ವ್ಯಾಸನು ನೆಮ್ಮದಿಯಿಂದಿದ್ದನು.

೨೫. ವ್ಯಾಸನ ಮುಖದಿಂದ ಹೊರಗೆ ಬಂದ ಮಂತ್ರವು ಮಹಾದೇವತೆಗಳಿಗೆ ಸಂಬಂಧಪಟ್ಟಿತ್ತಾದ್ದರಿಂದ, ಅದು ಬೆಳಗಿನ ಸೂರ್ಯನ ಬಿಂಬದಿಂದ ಹೊರಗೆ ಬರುವ ಸೌಮ್ಯವಾದ ಪ್ರಕಾಶದ ಹಾಗೆ, ಆತನ ಮುಖದಿಂದ ಕಿಡಿಯ ರೂಪ ದಲ್ಲಿ ಹೊರಟುಬಂದು ಪಾರ್ಥನ ಮುಖವನ್ನು ಸೇರಿತು. ಸೂರ್ಯನಿಂದ ಬಂದ ಕಿರಣ ತಗುಲಿದರೆ ಕಮಲವು ಹೇಗೆ ಅರಳುವುದೋ ಹಾಗೆ, ವ್ಯಾಸನು ಅನುಗ್ರಹಿ ಸಿದ ದಿವ್ಯಮಂತ್ರೋಪದೇಶದಿಂದ ಕೃತಾರ್ಥನಾದೆನೆಂದು ಅರ್ಜುನನೂ ಹಿಗ್ಗಿದನು.

೨೬. ಬೇರೆ ಯಾವ ವಿಧವಾದ ಚಿತ್ತವೃತ್ತಿಗಳೂ ಇಲ್ಲದಂತೆ ತಡೆಹಾಕಿ ಚಿತ್ತವನ್ನು ದೇವತೆಯಲ್ಲಿ ಸೇರಿಸುವುದು ಯೋಗ. ಇಂತಹ ಯೋಗವನ್ನು ಅಭ್ಯಾಸಮಾಡಬೇಕಾದರೆ ಅದಕ್ಕೆ ಕೆಲವು ಪೂರ್ವಸಿದ್ಧತೆಗಳು ಬೇಕು. ಆದರೆ, ಅಂತಹ ಸಿದ್ಧತೆಗಳೊಂದೂ ಬೇಕಾಗಿರಲಿಲ್ಲ ಅರ್ಜುನನಿಗೆ. ಅಂತಹ ಯೋಗ್ಯ ಅವನು. ಅವನಿಗೆ ವ್ಯಾಸನು ತನ್ನ ತಪೋಬಲದಿಂದ ಯೋಗವನ್ನು ದಾನ ಮಾಡಿದನು. ಆ ಯೋಗವನ್ನು ಪಡೆದ ಕೂಡಲೆ, ಅದುವರೆಗೆ ತಾನು ತಿಳಿಯ ದಿದ್ದ ಸೃಷ್ಟಿಯ ರಹಸ್ಯಗಳೂ ದೇವತಾರಹಸ್ಯಗಳೂ ಅರ್ಜುನನಿಗೆ ತಟ್ಟನೆ ತಿಳಿದುವು. ಅದುವರೆಗೂ ಕುರುಡಾಗಿದ್ದವನಿಗೆ ಏಕಾಏಕಿ ಕಣ್ಣನ್ನು ತೆರೆದು ತೋರಿಸಿದಹಾಗಾಯಿತು.

೨೭. ಹೀಗೆ ಹೊಸ ಬೆಳಕನ್ನು ಕಂಡ ಅರ್ಜುನನ ಆಕಾರವನ್ನು ನೋಡಿದರೆ, ಅವನ ಮನಸ್ಸಿನ ಉತ್ಸಾಹವೂ, ಅದೇ ಉತ್ಸಾಹದಿಂದ ಅವನು ತಪಸ್ಸ

ಮಾಡಿ ದಿವ್ಯಾಸ್ತ್ರಗಳನ್ನು ಪಡೆದುಕೊಂಡು ಬರುವನೆಂಬುದೂ ಗೋಚರವಾಗುತ್ತಿತ್ತು. ಕೈಕೊಂಡ ಕಾರ್ಯದಲ್ಲಿ ಸಫಲತೆಯನ್ನು ತಂದುಕೊಡುವಂತಹ ತಪಸ್ಸಿನಲ್ಲಿ ಚಿತ್ತವನ್ನು ಹೇಗೆ ಏಕಾಗ್ರವಾಗಿ ನಿಲ್ಲಿಸಬೇಕು ಎಂಬುದನ್ನು ವ್ಯಾಸಮುನಿ ಅರ್ಜುನನಿಗೆ ಹೇಳಿದನು :

೨೮. ನಾನು ನಿನಗೆ ಹೇಳಿಕೊಟ್ಟಿರುವ ಯೋಗದ ಬಲದಿಂದ ನಿನ್ನ ವೀರವನ್ನು ವೃದ್ಧಿಪಡಿಸಿಕೊ. ನಿನ್ನ ಇಷ್ಟಾರ್ಥವನ್ನು ಈಡೇರಿಸಿಕೊಳ್ಳುವುದಕ್ಕೆ ಯಾರೂ ಅಡ್ಡಬಾರದಂತೆ ನೋಡಿಕೊ. ಕ್ಷತ್ರಿಯನಿಗೆ ತಕ್ಕವಾದ ಆಯುಧಗಳನ್ನು ಧರಿಸು. ಮುನಿಗಳು ಮಾಡುವ ಜಪ, ತಪಗಳನ್ನು ಮಾಡು ; ಕಾಲಕಾಲಕ್ಕೆ ಉಪವಾಸಗಳನ್ನೂ ಸ್ನಾನಗಳನ್ನೂ ವ್ರತಗಳನ್ನೂ ನಡಸು.

೨೯. ಇಂದ್ರನನ್ನು ಒಲಿಸಿಕೊಳ್ಳಲು ಮಾಡಬೇಕಾದ ಕಠಿಣ ತಪಸ್ಸುಗಳನ್ನು ಮಾಡಲು ನೀನು ಇಂದ್ರಕೀಲವೆಂಬ ಸುಂದರವಾದ ಪರ್ವತಕ್ಕೆ ಹೋಗು. ಅಲ್ಲಿಗೆ ನಿನ್ನನ್ನು ಕರೆದುಕೊಂಡು ಹೋಗುವಂತೆ ಈ ಯಕ್ಷನಿಗೆ ಆಜ್ಞೆಮಾಡಿದ್ದೇನೆ. ಇವನು ನಿನ್ನನ್ನು ಆಕಾಶಮಾರ್ಗವಾಗಿ ಒಂದೇ ಕ್ಷಣದಲ್ಲಿ ಅಲ್ಲಿಗೆ ಒಯ್ಯುವನು.

೩೦. ವ್ಯಾಸಮುನಿಯು ಅರ್ಜುನನನ್ನು ಕುರಿತು ಹೀಗೆ ಮಾತನಾಡಿ, ತಟಕ್ಕನೆ ಕಣ್ಮರೆಯಾದನು. ಆ ಮುನಿಯ ಆಜ್ಞೆಯೇ ರೂಪುತಾಳಿ ಬಂದಿತೋ ಎಂಬ ಹಾಗೆ, ಅರ್ಜುನನನ್ನು ಇಂದ್ರಕೀಲಕ್ಕೆ ಒಯ್ಯಬೇಕಾದ ಯಕ್ಷನು ಆ ಸ್ಥಳದಲ್ಲಿ ಪ್ರತ್ಯಕ್ಷವಾದನು.

೩೧. ಯಕ್ಷನು ಅರ್ಜುನನಿಗೆ ನಮಸ್ಕಾರ ಮಾಡಿದನು. ಯಕ್ಷನನ್ನು ಅರ್ಜುನನು ಒಳ್ಳೆಯ ಮಾತುಗಳಿಂದ ಉಪಚರಿಸಿದನು. ಅದರಿಂದ ಯಕ್ಷನಿಗೆ ತುಂಬ ಸಂತೋಷವಾಯಿತು. ಸ್ನೇಹಿತನನ್ನು ಕಂಡ ಹಾಗೆ ಮನಸ್ಸು ಪ್ರಸನ್ನವಾಯಿತು. ಒಳ್ಳೆಯ ಜನರ ಜೊತೆಗೆ ಸೇರಿದರೆ, ಮನಸ್ಸಿಗೆ ವಿಶ್ವಾಸವುಂಟಾಗುವುದರಲ್ಲಿ ಏನು ಆಶ್ಚರ್ಯ!

೩೨. ಬೆಳಗಿನ ಜಾವದಲ್ಲಿ ಸೂರ್ಯನು ಪ್ರಕಾಶಮಾನವಾದ ಮೇರುಪರ್ವತದಿಂದ ತನ್ನ ಗಗನಯಾತ್ರೆಗೆ ಹೊರಟಾಗ, ಮೇರುಪರ್ವತದ ಬಳ್ಳಿಮನೆಗಳಲ್ಲಿ ಹೇಗೆ ಕತ್ತಲೆ ತುಂಬಿಕೊಳ್ಳುವುದೋ ಹಾಗೆ, ಅರ್ಜುನನು ತಮ್ಮನ್ನು ಅಗಲಿ

ಹೋಗುತ್ತಿರುವನಲ್ಲಾ ಎಂಬ ದುಃಖದ ಕತ್ತಲೆ ಪಾಂಡವರ ಹೃದಯಗಳಲ್ಲಿ ತುಂಬಿಕೊಂಡಿತು. ಸೂರ್ಯನು ಪುನಃ ಮೇರುವಿಗೆ ಮೊದಲಿಗಿಂತ ಅಧಿಕವಾದ ಪ್ರಕಾಶದಿಂದ ಹಿಂದಿರುಗುವ ಹಾಗೆ ಅರ್ಜುನನು ಕೂಡ ದಿವ್ಯಾಸ್ತ್ರಗಳನ್ನು ಸಂಪಾದಿಸಿಕೊಂಡು ಮೊದಲಿಗಿಂತ ಅಧಿಕವಾದ ವೀರ್ಯದಿಂದ ಹಿಂದಿರುಗುತ್ತಾನೆ ಎಂಬುದನ್ನು ಆ ಅಣ್ಣತಮ್ಮಂದಿರು ಮೋಹಜನ್ಯವಾದ ಅಜ್ಞಾನದಿಂದ ತತ್ಕಾಲಕ್ಕೆ ಮರೆತುಬಿಟ್ಟರು.

೩೨. ಆದರೂ, ಅರ್ಜುನನು ಯಾವ ನಿಶ್ಚಿತವಾದ ಕಾರ್ಯಕ್ಕಾಗಿ ಹೋಗುತ್ತಿರುವನೆಂಬುದನ್ನು ನೆನೆದರು. ಹೋದ ಕೆಲಸ ಕೈಗೂಡುವುದೆಂದು ಭರವಸೆಗೊಂಡರು. ಹೋಗುವವನು ತಮ್ಮ ಸೋದರನೆಂದು ಪ್ರೀತಿ ಉಕ್ಕಿತು. ಆದ್ದರಿಂದಲೇ, ಅರ್ಜುನನ ವಿಯೋಗದಿಂದಾದ ದುಃಖದ ಭಾರವು ಹಿರಿದಾಗಿದ್ದರೂ, ಅದನ್ನು ನಾಲ್ವರೂ ಹಂಚಿಕೊಂಡದ್ದರಿಂದ, ಅದು ಲಘುವೆಂದೆನಿಸಿ ಸಹಿಸಲು ಸಾಧ್ಯವಾಯಿತು.

೩೪. ಪಾಂಡವರ ಶೋಕವು ಕ್ರಮಕ್ರಮವಾಗಿ, ಅವರಿಗೆ ಜ್ಞಾನೋದಯವಾದ ಹಾಗೆಲ್ಲ, ಕರಗಿ ಮಾಯವಾಗಿಹೋಯಿತು. ಅದಕ್ಕೆ ನಾಲ್ಕು ಕಾರಣಗಳು. ಯಾವುವೆಂದರೆ: ಅದುವರೆಗೂ ಎಷ್ಟೋ ಕಷ್ಟನಷ್ಟಗಳನ್ನು ಸಹಿಸಿಕೊಂಡು ಬಂದ ಅವರ ಸಹಜವಾದ ಧೈರ್ಯ—ಒಂದು; ವ್ಯಾಸರ ಮಾತಿನ ಪ್ರಕಾರ ಅರ್ಜುನನು ದಿವ್ಯಾಸ್ತ್ರಗಳನ್ನು ಪಡೆದು ಸುರಕ್ಷಿತವಾಗಿ ಹಿಂದಿರುಗಿ ಬರುವನೆಂಬ ಭರವಸೆ—ಎರಡು; ತಮಗೆ ತುಂಬ ಅನ್ಯಾಯ ಮಾಡಿರುವ ದುರ್ಯೋಧನನನ್ನು ಧ್ವಂಸ ಮಾಡಲೇಬೇಕು ಎಂಬ ಕೋಪವೂ, ಅದಕ್ಕೆ ಅರ್ಜುನನ ಪ್ರಯಾಣ ಅನಿವಾರ್ಯವೆಂಬ ವಿವೇಕವೂ—ಮೂರು; ಅರ್ಜುನನಂತಹ ಮಹಾವೀರನು ಯಾವ ಆಪತ್ತು ಬಂದರೂ ಅದರಿಂದ ಉದ್ಧಾರವಾಗಬಲ್ಲ ಸಾಮರ್ಥ್ಯವುಳ್ಳವನು ಎಂಬ ತಿಳಿವಳಿಕೆ—ನಾಲ್ಕು. ಈ ಕಾರಣಗಳಿಂದ ಅವರು ತಮ್ಮ ಶೋಕಗಳನ್ನು ಕಳೆದುಕೊಳ್ಳುವುದು ಸಾಧ್ಯವಾಯಿತು.

೩೫. ದುಃಖವು ನಾಲ್ಕು ಜನ ಪಾಂಡವರನ್ನೇನೋ ಬಿಟ್ಟುಹೋಯಿತು. ಆದರೆ ದ್ರೌಪದಿಯ ದುಃಖ ಕಡಮೆಯಾಗುವ ಬದಲು ಇನ್ನೂ ಹೆಚ್ಚಾಯಿತು. ಹಗಲಿನ ನಾಲ್ಕು ಯಾಮಗಳನ್ನು ಬಿಟ್ಟುಹೋದ ಕತ್ತಲೆ ಕಪ್ಪಾದ ರಾತ್ರಿಯಲ್ಲಿ

ಬಂದು ತುಂಬಿಕೊಳ್ಳುವ ಹಾಗೆ, ಮಹಾ ತೇಜಸ್ವಿಗಳಾದ ನಾಲ್ವರು ಪಾಂಡವ ರನ್ನು ಬಿಟ್ಟ ದುಃಖವು ಒಟ್ಟಾಗಿ ಬಂದು, ಕೃಷ್ಣೆಯೆನಿಸಿದ ದ್ರೌಪದಿಯ ಮನಸ್ಸಿನಲ್ಲಿ ತುಂಬಿಕೊಂಡಿತು.

೩೬. ಅರ್ಜುನನನ್ನು ಎಷ್ಟು ನೋಡಿದರೂ ತನಗೆ ತೃಪ್ತಿಯಿಲ್ಲ ಎಂಬ ದ್ರೌಪದಿಯ ಮನೋಭಾವ ಆಕೆಯ ಕಣ್ಣುಗಳಿಂದ ವ್ಯಕ್ತವಾಗುತ್ತಿತ್ತು. ಅಗಲಿಕೆಯ ದುಃಖ ದುಸ್ಸಹವಾದದ್ದರಿಂದ ಆಕೆಯ ಕಣ್ಣುತುಂಬ ನೀರು ತುಂಬಿ ಬಂದು, ಹಿಮದಿಂದ ಮುಚ್ಚಿಹೋದ ಕನ್ನೈದಿಲೆಗಳ ಹಾಗೆ ಆ ಕಣ್ಣುಗಳ ಸಹಜವಾದ ಕಾಂತಿಗೆ ಮಂಕು ಹಿಡಿದುಹೋಗಿತ್ತು. ದುಃಖದ ಆಧಿಕ್ಯದಿಂದ ಕಣ್ಣೀರು ಕಣ್ಣಿನಿಂದ ಹೊರಗೆ ಬರುವ ಹಾಗಿದ್ದರೂ, ಎಲ್ಲಿ ರೆಪ್ಪೆ ಹಾಕಿದರೆ ಕಣ್ಣೀರು ಕೆಳಗೆ ಬೀಳುವುದೋ, ಪ್ರಯಾಣ ಕಾಲದಲ್ಲಿ ಹಾಗೆ ಕಣ್ಣೀರು ಹಾಕಿದರೆ ಅದು ಪ್ರಿಯನಿಗೆ ಅಮಂಗಳಕರ ಎಂಬ ಭೀತಿಯಿಂದ ದ್ರೌಪದಿಯು ರೆಪ್ಪೆ ಹೊಯ್ಯದೆ ಅರ್ಜುನನನ್ನೇ ನೋಡುತ್ತಿದ್ದಳು.

೩೭. ಸಾಧ್ವಿಯಾದ ಪತ್ನಿಗೆ ತನ್ನ ಪ್ರಿಯ ಪತಿಯ ಮೇಲೆ ಸಹಜವಾಗಿ ಇರುವ ಪ್ರೇಮದ ರಸವು ದ್ರೌಪದಿಯ ಚೆಲುವಾದ ಕಣ್ಣಿನ ನೋಟದಲ್ಲಿ ಉಕ್ಕಿ ಬರುತ್ತಿತ್ತು. ಆ ಪ್ರೇಮದ ರಸವನ್ನು ಪಾರ್ಥನು, ಪ್ರಯಾಣ ಹೋಗುವಾಗ ಆಹಾರದ ಬುತ್ತಿಯನ್ನು ಕಟ್ಟಿಕೊಂಡು ಹೋಗುವುದಿಲ್ಲವೇ ಹಾಗೆ, ಉಲ್ಲಾಸಗೊಂಡು ಅರಳಿದ ತನ್ನ ಮನಸ್ಸೆಂಬ ಕೈಗಳ ಬೊಗಸೆಯಿಂದ ಸಮೃದ್ಧಿಯಾಗಿ ತುಂಬಿಕೊಂಡನು.

೩೮. ಬೇಸಗೆ ಕಾಲ ಬಂದಾಗ, ಸೂರ್ಯನ ತಾಪದಿಂದ ತೊರೆಯಲ್ಲಿ ನೀರು ಇಂಗಿ, ಕೆಸರು ಹೆಚ್ಚಾಗುತ್ತದೆ. ಅಂತಹ ತೊರೆಗೆ ಕಾಡಾನೆ ನುಗ್ಗಿ ಓಡಿಯಾಡಿದರೆ, ಅಡಿಯಲ್ಲಿದ್ದ ಕೆಸರೆಲ್ಲಾ ಮೇಲೆದ್ದು ಕಾಣುತ್ತದೆ. ಹಾಗೆ ಅರ್ಜುನನ ಅಗಲಿಕೆಯಿಂದ ತಾಪಗೊಂಡ ದ್ರೌಪದಿಯ ಮನಸ್ಸಿನಲ್ಲಿ, ದುರ್ಯೋಧನನಿಂದ ಆದ ಅಪರಾಧಗಳೆಂಬ ಕಾಡಾನೆಗಳ ಹಿಂಡು ನುಗ್ಗಿ ಆಕೆಯ ಮನಸ್ಸು ಉದ್ವೇಗದಿಂದ ಕವಡಿಹೋಯಿತು. ದುಃಖದಿಂದ ಬಂದ ಕಣ್ಣೀರನ್ನು ಹಾಗೆಯೆ ಅಡಗಿಸಿಕೊಂಡಳು. ಕಂಠದ ಸೆರೆ ಬಿಗಿದುವು. ದುಃಖದಿಂದ ಮಾತನಾಡಲಾರದೆ, ಮಾತನಾಡದೆಯೂ ಇರಲಾರದೆ, ದ್ರೌಪದಿಯು ಅರ್ಜುನನನ್ನು ಕುರಿತು ಹೀಗೆಂದಳು:

೩೯. ಹಗೆಗಳಾದ ಕೌರವರು ನಮಗೆ ಉಂಟುಮಾಡಿದ ಮೋಸದ ಕೆಸರಿನಲ್ಲಿ

ನಮ್ಮ ಐಶ್ವರ್ಯವಾದ ಗೌರವವು ಮುಳುಗಿಹೋಗಿದೆ. ಅದನ್ನು ಪುನಃ ಮೇಲೆ ಎತ್ತುವುದು ನಿನ್ನ ಭಾರ. ಅದು ಆಗಬೇಕಾದರೆ, ದೇವತೆಗಳಿಂದ ಆಯುಧಗಳನ್ನು ಸಂಪಾದಿಸುವ ತಪಸ್ಸು ನಿನ್ನಿಂದ ನಡೆಯಬೇಕು. ಆ ತಪಸ್ಸಿನಿಂದಲೆ ನಮ್ಮ ಚಿಂತೆಗಳೆಲ್ಲವೂ ತೀರಬೇಕು. ಆದ್ದರಿಂದ ನಿನ್ನ ತಪಸ್ಸನ್ನು ನೀನು ಸಾಂಗವಾಗಿ ಪೂರೈಸುವ ವರೆಗೂ ನಮ್ಮನ್ನು ಜ್ಞಾಪಿಸಿಕೊಂಡು ದುಃಖ ಪಡಬೇಡ.

೪೦. ಯಾರು ಕೀರ್ತಿಯನ್ನು ಬಯಸುತ್ತ, ಸುಖ ಲಭಿಸಬೇಕೆಂದು ಅಪೇಕ್ಷಿಸುತ್ತ, ಸಾಮಾನ್ಯ ಮನುಷ್ಯರು ಪಡೆಯಲಾರದ ಅತಿಮಾನುಷ ಪದವಿಯನ್ನು ಕೋರಿ, ಕಾತರವಿಲ್ಲದೆ ತಮ್ಮ ಇಷ್ಟಾರ್ಥಗಳಿಗಾಗಿ ಸಾಧನೆ ಮಾಡುತ್ತಾರೋ ಅಂಥವರ ಹತ್ತಿರಕ್ಕೆ ಸಿದ್ಧಿ ತಾನೇ ಆತುರವನ್ನು ತೋರಿಸುತ್ತ ಬಂದು ಸೇರುತ್ತಾಳೆ—ತನ್ನನ್ನು ಉತ್ಕಟವಾಗಿ ಬಯಸಿದ ಪತಿಯ ಬಳಿಗೆ ಪತ್ನಿ ಬರುವ ಹಾಗೆ.

೪೧. ಕ್ಷತ್ರಿಯರಾದ ನೀವು ಭೂಮಿಯನ್ನು ಕಾಪಾಡಲೆಂದು ವಿಧಿ ನಿಮಗೆ ಒಳ್ಳೆಯ ಕ್ಷತ್ರಿಯತೇಜಸ್ಸೆಂಬ ಸಂಪತ್ತನ್ನು ಯಥೇಚ್ಛವಾಗಿ ಕೊಟ್ಟಿತು. ಅದನ್ನು ದುರ್ಯೋಧನನು ಮೋಸದಿಂದ ಕದ್ದನು. ಈಗ ನೀವು ಕಾಡಿಗೆ ಬಂದಿರುವಿರಿ. ಉದ್ಯೋಗ ಮಾಡಿ ಜಯವನ್ನು ಸಂಪಾದಿಸಬೇಕೆಂಬ ನಿಮ್ಮ ಪೌರುಷವನ್ನು ಅವನು ನಾಶಮಾಡಿದ್ದಾನೆ; ಅವನಿಂದ ಏನೇನು ಅನ್ಯಾಯಗಳಾದರೂ ನೀವು ಸಹಿಸಿಕೊಂಡು ಸುಮ್ಮನಿದ್ದೀರಿ. ಪ್ರಾಣಕ್ಕೆ ಸಮನಾಗಿರುವ ಅಭಿಮಾನ ಕೂಡ ನಿಮ್ಮ ಪಾಲಿಗೆ ಇಲ್ಲವಾಗಿದೆ.

೪೨. ನಂಟರಿಂದ ಒದಗಿದ ಈ ಕಷ್ಟವನ್ನು ಕೇಳಿದ ರಾಜರು ಅದನ್ನು ನಂಬಲಾರದೆ ಹೋದರು. ಪಾಂಡವರಿಗೆ ಇಂತಹ ಪರಿಭವ ಒದಗಿತೆಂದರೆ, ಯಾರು ತಾನೆ ನಂಬಿಯಾರು ? ಹೇಗೋ ಅಂತೂ ಅವರನ್ನು ನಂಬಿಸಿದ ಮೇಲೆ 'ಅಯ್ಯೋ ಪಾಂಡವರಿಗೆ ಹೀಗಾಯಿತೇ!' ಎಂದು ಅವರು ನಾಚಿದರು. 'ಕಷ್ಟದಲ್ಲಿರುವವರಿಗೆ ಆಶ್ರಯಕೊಟ್ಟು ಉದ್ಧಾರಮಾಡುವವರು ಈ ಪಾಂಡವರು' ಎಂಬ ನಿಮ್ಮ ಯಶಸ್ಸು ಪೃಥ್ವಿಗೇ ಚಪ್ಪರವಾಗಿ ದಿಕ್ಕು ದಿಕ್ಕಿಗೂ ಹಬ್ಬಿತ್ತು. ಕೌರವನು ಆ ಯಶಸ್ಸನ್ನು ಮುಚ್ಚಿಸಿಬಿಟ್ಟನು.

೪೩. ಹಿಂದೆ ದಿಗ್ವಿಜಯ, ರಾಜಸೂಯ ಮೊದಲಾದ ಸಂದರ್ಭಗಳಲ್ಲಿ ನೀವು

ತೋರಿಸಿದ ವೀರಕಾರ್ಯಗಳನ್ನೆಲ್ಲ ಸುಳ್ಳು ಎನ್ನಿಸಿ, ಅದರಿಂದ ಬಂದಿದ್ದ ಒಳ್ಳೆಯ ಹೆಸರನ್ನು ಇಲ್ಲವೆನ್ನಿಸಿದನು. ಸಾಯಂಕಾಲ ಬಂದಾಗ ಸೂರ್ಯನ ಕಿರಣಗಳು ತಮ್ಮ ಬೆಳವಣಿಗೆಯನ್ನು ಕಳೆದುಕೊಂಡು, ಮುಂದೆ ಬೆಳಕೇ ಇಲ್ಲದೆ ಹೋಗುವ ಹಾಗೆ—ದುರ್ಯೋಧನನು ನಿಮ್ಮನ್ನು ನಿರ್ವೀರ್ಯರನ್ನಾಗಿ ಮಾಡಿ, ನಿಮ್ಮ ಕೀರ್ತಿಯನ್ನು ಇಲ್ಲವೆನಿಸಿರುವುದರಿಂದ ಮುಂದೆಯಾದರೂ ನೀವು ವೀರರಾಗಿ ಹೆಸರು ಗಳಿಸುವಿರೋ ಇಲ್ಲವೋ ಎಂಬುದು ಸಂದೇಹ.

೪೪. ಹೀಗೆ ಇಷ್ಟೆಲ್ಲ ಅಪಕಾರಗಳನ್ನು ಈ ಶತ್ರು ನಿಮಗೆ ಮಾಡಿದ್ದಾನೆ. ಅದನ್ನು ಜ್ಞಾಪಕಕ್ಕೆ ತಂದುಕೊಂಡರೂ ಸಹಿಸುವುದು ಕಷ್ಟವಾಗುತ್ತದೆ; ಎಂದ ಮೇಲೆ ಅದನ್ನು ಅನುಭವಿಸುವುದು ಇನ್ನೂ ಕಷ್ಟ. ಈ ಮಧ್ಯೆ ನೀನೂ ನಮ್ಮನ್ನು ಅಗಲಿ ಹೋಗುವುದು, ನನ್ನ ಎದೆಯಲ್ಲಿ ಒಣಗಿದ್ದ ಹಳೆಯ ಗಾಯವನ್ನು ಪುನಃ ಕೆದಕಿ ಹೊಸದುಮಾಡಿದಂತೆ ಸಂಕಟವನ್ನುಂಟುಮಾಡುತ್ತಿದೆ.

೪೫. ಮನುಷ್ಯನಿಗೆ ಇರುವ ಮುಖ್ಯವಾದ ಲಾಂಛನವೆಂದರೆ ಆತನ ಅಭಿಮಾನ; ಆನೆಗಳಿಗೆ ಕೊಂಬು ಇದ್ದ ಹಾಗೆ. ಅಭಿಮಾನಶೂನ್ಯನಾದ ನೀನು ಕೊಂಬು ಮುರಿದ ಆನೆಯಂತೆ ವಿಕಾರವಾಗಿ ಕಾಣಿಸುತ್ತಿದ್ದೀಯೆ. ಶತ್ರುವಾದ ದುರ್ಯೋಧನನ ಪ್ರತಾಪದಿಂದ ನಿನ್ನ ಕ್ಷತ್ರಿಯ ಕಾಂತಿಯು, ಮೋಡ ಮುಚ್ಚಿದ ಹಗಲಿನ ಹಾಗೆ, ಮಂಕಾಗಿಹೋಗಿದೆ. ಮುಚ್ಚಿದ ಮೋಡ ಚದರಿ ಹೋಗಿ ಹಗಲು ತೇಜಸ್ವಿಯಾಗುವಂತೆ, ನಿನಗೂ ಶತ್ರುಬಾಧೆ ತೊಲಗಿ ನೀನೂ ಮೊದಲಿನಂತಾಗು.

೪೬. ಹಿಂದಿನಿಂದಲೂ ನಿನ್ನ ಬಳಿಯಿದ್ದ ಆಯುಧಗಳು ಈಗಲೂ ನಿನ್ನ ಬಳಿಯೇ ಇವೆ. ಆದರೆ, ಅವುಗಳನ್ನು ಉಪಯೋಗಿಸದೆ ಇರುವುದರಿಂದ ಅವು ನಾಚಿಕೊಂಡಿವೆಯೋ ಎಂಬ ಹಾಗೆ ಕಳೆಗುಂದಿವೆ. ನೀನಾದರೂ ಅಷ್ಟೆ. ಯಶಸ್ಸು ಕೀರ್ತಿಗಳನ್ನೆಲ್ಲ ಕಳೆದುಕೊಂಡು, ನೀರು ಬತ್ತಿಹೋದ ಸಮುದ್ರದ ಹಾಗೆ ಕಾಂತಿಹೀನನಾಗಿರುವೆ.

೪೭. ಹಿಂದೆ ದುರ್ಯೋಧನನ ಸಭೆಯಲ್ಲಿ ದುಶ್ಶಾಸನನು ಹಿಡಿದು ಎಳೆದಾಗ ಈ ಕೂದಲು ಕೆದರಿಹೋಯಿತು. ಆಗ ನನ್ನನ್ನು ಕಾಪಾಡುವವರು ಯಾರೂ ಇಲ್ಲದೆ ಹೋದರು. ನನ್ನ ಪಾಲಿನ ವಿಧಿ ನನ್ನನ್ನು ಕಾಪಾಡಿತು. 'ಗಂಡಂದಿರು ನೀವಿದ್ದು ಏನು ಪ್ರಯೋಜನ?' ಎಂದು ಈ ಕೂದಲು ನಿಮ್ಮನ್ನು ಹಂಗಿಸಿತು;

ನೀನು ಈಗಲೂ ಆ ಹೊತ್ತು ಆದ ಅವಮಾನವನ್ನು ಸಹಿಸಿಕೊಂಡ ಪಾರ್ಥನೋ ಅಥವಾ ಇಂದಿಗಾದರೂ ನೀನು ಬದಲಾಗಿದ್ದೀಯೋ?

೪೮. 'ಕ್ಷತ್ರಿಯ' ಎಂದು ಎನ್ನಿಸಿಕೊಳ್ಳಬೇಕಾದರೆ ಮೂರು ಗುಣಗಳಿರಬೇಕು. ಮೊದಲಾಗಿ—ತ್ರಾಣವಿರಬೇಕು; ಎರಡನೆಯದಾಗಿ—ಆ ತ್ರಾಣಕ್ಕೆ ತಕ್ಕ ಬಿಲ್ಲು ಇರಬೇಕು; ಮೂರನೆಯದಾಗಿ—ತ್ರಾಣದಿಂದಲೂ ಬಿಲ್ಲಿನಿಂದಲೂ ಕರ್ಮ ಮಾಡಬೇಕು. ಇವು ಮೂರೂ ಇಲ್ಲದೆ, ತ್ರಾಣ ಕಾರ್ಮುಕಗಳಿದ್ದರೂ ಕರ್ಮಮಾಡದೆ ಇರುವವನನ್ನು 'ಕ್ಷತ್ರಿಯ' ಎಂದರೆ, ಅದು ಆ ಶಬ್ದವನ್ನು ದುರುಪಯೋಗಪಡಿಸಿದಂತೆ. ಅದರಿಂದ ಆ ಶಬ್ದಕ್ಕೆ ಅಪಮಾನ. ಏಕೆಂದರೆ, 'ಕ್ಷತ್ರಿಯ' ಶಬ್ದಕ್ಕೆ 'ಗಾಯವಾಗದಂತೆ ಕಾಪಾಡುವವನು' ಎಂದು ಅರ್ಥ.

೪೯. ನಾವು ನಮ್ಮ ರಾಜತೇಜಸ್ಸನ್ನು ಈಗ ಕಳೆದುಕೊಂಡಿದ್ದರೂ, ಮುಂದೆ ನಿನ್ನಿಂದ ನಮಗೆ ಸುಖವುಂಟಾಗುತ್ತದೆ ಎಂಬ ಆಶೆಯಿಂದ ಸಾಯದೆ ಬದುಕಿದ್ದೇವೆ. ಅದರ ಹಾಗೆಯೇ ನಿನ್ನ ಪ್ರಸಿದ್ಧವಾದ ಪರಾಕ್ರಮವೇ ಮೊದಲಾದ ಗುಣಗಳು ಕೂಡ ಕಾರ್ಯರೂಪದಲ್ಲಿ ಕಾಣಿಸಿಕೊಳ್ಳಲಾರದೆ, ಬರಿಯ ಹೆಸರು ಮಾತ್ರವಾಗಿ ಉಳಿದು ದುಃಖಪಡುತ್ತಿರುವ ಹಾಗಿದೆ.

೫೦. ಪಾಂಡವರಾದ ನೀವು ಸಿಂಹಗಳು. ನಿಮ್ಮೊಡನೆ ಹೋಲಿಸಿದರೆ ಕೌರವರು ಆನೆಗಳು. ನೀವು ನಿಮಗೆ ಆದ ಅಪರಾಧಗಳನ್ನೆಲ್ಲ ಸಹಿಸಿಕೊಂಡು ನಿಮ್ಮ ಪರಾಕ್ರಮವನ್ನು ಪ್ರಕಟಪಡಿಸದೆ ಇರುವುದರಿಂದ ಆನೆಯು ಸಿಂಹದ ಕೇಸರವನ್ನು ಕಿತ್ತುಹಾಕಿದ ಹಾಗೆ ಶತ್ರು ನಿಮ್ಮನ್ನು ಮದದಿಂದ ಕೆಣಕುತ್ತಿದ್ದಾನೆ. ಅವನಿಗೆ ತಕ್ಕ ಶಿಕ್ಷೆಯನ್ನು ವಿಧಿಸುವ ಗುರುತರವಾದ ಕಾರ್ಯವು ನಿನ್ನ ಪಾಲಿಗೆ ಬಂದಿದೆ. ಹಗಲಿನ ಪ್ರಕಾಶಕ್ಕೂ ಪ್ರತಾಪಕ್ಕೂ ಸೂರ್ಯನು ಕಾರಣನಾಗುವ ಹಾಗೆ, ನೀನು ನಿನ್ನ ಪ್ರತಾಪವನ್ನು ಮೆರೆದು, ನಮಗೆ ಪ್ರಕಾಶವನ್ನು ಉಂಟು ಮಾಡಬೇಕು.

೫೧. ಲೋಕದ ಜನರಲ್ಲಿ ಸಾಮಾನ್ಯವಾಗಿ ಕಂಡುಬರುವ ಯೋಗ್ಯತೆಗಿಂತ ಮೇಲಾದ ಯೋಗ್ಯತೆ ಇರಬಹುದಾದರೂ, ಅದನ್ನು ಯಾವನು ಕಾರ್ಯರೂಪದಲ್ಲಿ ತೋರಿಸಿ ಫಲಗಳನ್ನು ಕಾಣಿಸುವನೋ ಅವನಿಗೆ ಮನ್ನಣೆ ದೊರಕುತ್ತದೆ. ಪೌರುಷದಿಂದ ಕೆಲಸ ಮಾಡಿದವರು ಯಾರು ಯಾರು ಎಂದು ಗಣನೆಮಾಡುವ ಸಂದರ್ಭದಲ್ಲಿ ಅವನಿಗೆ ಮೊದಲ ಮರ್ಯಾದೆ ದೊರಕುತ್ತದೆ. ಆದ್ದರಿಂದ, ಉಳ್ಳ

ಯೋಗ್ಯತೆಯನ್ನು ಕಾರ್ಯದಲ್ಲಿ ತೋರಿದಾಗ ಮಾತ್ರ ಯೋಗ್ಯತೆ ಇದ್ದದ್ದಕ್ಕೆ ಸಾರ್ಥಕ.

೫೨. ದೇವತೆಗಳನ್ನು ಮೆಚ್ಚಿಸಿ, ಆಯುಧಗಳನ್ನು ಪಡೆದು, ಶತ್ರುಗಳನ್ನು ಸಂಹಾರಮಾಡುವ ಉದ್ಯೋಗಕ್ಕೆ ನೀನು ಹೊರಟಿದ್ದೀಯೆ. ನಮ್ಮನ್ನು ಬಿಟ್ಟು ಹೋಗುತ್ತಿರುವ ನೀನು ನಮಗೆ ಪ್ರಿಯನಾದ ಕಾರಣದಿಂದ, ನಿನಗೆ ಎಲ್ಲಿ ಏನು ಕೇಡಾದೀತೋ ಎಂಬ ಚಿಂತೆಯಿಂದ ನಮ್ಮ ಮನಸ್ಸಿಗೆ ವ್ಯಥೆಯುಂಟಾಗುತ್ತಿದೆ. ಅದಕ್ಕೆ ಅವಕಾಶವಿಲ್ಲದ ಹಾಗೆ, ನಿನ್ನ ಸಾಧನೆ ನಿರ್ವಿಘ್ನವಾಗಿ ಸಿದ್ಧಿಯನ್ನು ಪಡೆಯುವ ಹಾಗೆ ಇಂದ್ರನು ಅನುಗ್ರಹಿಸಲಿ.

೫೩. ನಿರ್ಜನವಾದ ಪ್ರದೇಶಕ್ಕೆ ಹೋಗುತ್ತಿದ್ದೀಯೆ, ಪವಿತ್ರವಾದ ಪ್ರದೇಶಕ್ಕೆ ಹೋಗುತ್ತಿದ್ದೀಯೆ, ಏಕಾಕಿಯಾಗಿ ಹೋಗುತ್ತಿದ್ದೀಯೆ. ಆದರೂ ಮೈಮರೆಯದೆ ಸದಾ ಜಾಗೃತನಾಗಿರು. ಏಕೆಂದರೆ, ಪ್ರೀತಿಗಳೂ ದ್ವೇಷಗಳೂ ಒಳಗೆ ತುಂಬಿರುವಾಗ, ಎಂತಹ ಸತ್ಪುರುಷನಾದರೂ ಅವನ ಮನಸ್ಸು ಕೆಟ್ಟುಹೋಗುತ್ತದೆ. ಆದ್ದರಿಂದ, ಯಾವ ವಿಧವಾದ ಮನೋವಿಕಾರಗಳಿಗೂ ಆಸ್ಪದವಾಗದಂತೆ ಎಚ್ಚರದಿಂದಿದ್ದು, ಏಕಾಗ್ರಚಿತ್ತದಿಂದ ಸಿದ್ಧಿಯನ್ನು ಪಡೆದು ಬಾ.

೫೪. ಶೀಘ್ರವಾಗಿ ತಪಸ್ಸಿಗೆ ಹೋಗು. ವ್ಯಾಸಮುನಿಯು ಹೇಳಿದಂತೆ ಮಾಡು. ನಮ್ಮ ಇಷ್ಟಾರ್ಥಗಳನ್ನು ಈಡೇರಿಸು. ಹೋದ ಕಾರ್ಯವನ್ನು ಕೈಗೂಡಿಸಿಕೊಂಡು ಬೇಗ ಹಿಂದಿರುಗು. ಸಿದ್ಧಿಪಡೆದು ಬಂದ ನಿನ್ನನ್ನು ನಾನು ಗಾಢವಾಗಿ ಆಲಿಂಗಿಸಿಕೊಂಡು ಸ್ವಾಗತಿಸುವೆನು.

೫೫. ದ್ರೌಪದಿಯು ಹೇಳಿದ ಮಾತುಗಳನ್ನು ಕೇಳಿದ ಹಾಗೆಲ್ಲ ಅರ್ಜುನನಿಗೆ ಹಿಂದೆ ತಾವು ಅನುಭವಿಸಿದ ಅವಮಾನಗಳೆಲ್ಲವನ್ನೂ ಪುನಃ ಹೊಸದಾಗಿ ಅನುಭವಿಸಿದ ಹಾಗಾಗಿ ತಾಪವುಂಟಾಯಿತು. ಸೂರ್ಯನು ಉತ್ತರದ ಕಡೆಗೆ ತಾನು ಪ್ರಯಾಣ ಹೋಗುವಾಗ ಹೇಗೆ ಪ್ರತಾಪದಿಂದ ಪ್ರಜ್ವಲಿಸುವನೋ ಹಾಗೆ, ಉತ್ತರದಿಕ್ಕಿನ ಇಂದ್ರಕೀಲಕ್ಕೆ ಪ್ರಯಾಣಮಾಡಲು ಹೊರಟಿದ್ದ ಅರ್ಜುನನು ಶತ್ರುಗಳ ಮೇಲಿನ ರೋಷದಿಂದ ಉರಿಯನ್ನು ಕಾರಿದನು.

೫೬. ಶತ್ರುಗಳಾದ ಕೌರವರನ್ನು ತನ್ನ ಕಣ್ಣೆದುರಿಗೇ ಕಂಡು ಯುದ್ಧಕ್ಕೆ ಸಿದ್ಧನಾದನೋ ಎಂಬ ಹಾಗೆ, ಕುಲಗುರುವಾದ ಧೌಮ್ಯನು ಕೊಟ್ಟ ಆಯುಧ

ಗಳನ್ನು ತಾನು ಧರಿಸಿದನು. ಸಹಜವಾಗಿಯೇ ಸುಂದರನಾದ ಅರ್ಜುನನು ಹೀಗೆ ಆಯುಧಗಳನ್ನು ಧರಿಸಿ ನಿಂತಾಗ, ಭಯಂಕರವಾದ ಶತ್ರುಸಂಹಾರಕ ಮಂತ್ರದಂತೆ ಕಂಗೊಳಿಸಿದನು.

೫೭. ಅರ್ಜುನನು ತನ್ನ ಬಿಲ್ಲು, ಬತ್ತಳಿಕೆ, ಕತ್ತಿಗಳನ್ನು ಧರಿಸಿದನು. ಗಾಂಡಿವವೆಂಬ ಆ ಬಿಲ್ಲು ಎಂಥದೆಂದರೆ, ಅದರ ಹಗ್ಗವನ್ನು ಎಳೆದು ಬಾಣ ಬಿಟ್ಟರೆ, ತಪ್ಪದೆ ಶತ್ರುಸಂಹಾರವಾಗುವುದು. ಅದರ ಟಂಕಾರ ಲೋಕಪ್ರಸಿದ್ಧ ವಾದದ್ದು. ಅರ್ಜುನನು ಎರಡು ಕೈಗಳಲ್ಲೂ ಬಾಣಬಿಡುವವನಾದ್ದರಿಂದ ಅವನಿಗೆ ಎರಡು ಬತ್ತಳಿಕೆ. ಯುದ್ಧದಲ್ಲಿ ಎಂದೂ ಬೆನ್ನುತಿರುಗಿಸಿದವನಲ್ಲವಾದ್ದರಿಂದ, ಆ ಬತ್ತಳಿಕೆಗಳನ್ನು ಯಾರು ಕಂಡದ್ದಿಲ್ಲ. ಇದರ ಜೊತೆಗೆ ಹರಿತವಾದ ಖಡ್ಗ.

೫೮. ಹಿಂದೆ ಖಾಂಡವವನವನ್ನು ಅಗ್ನಿಗೆ ಊಡಿಸಿದ ಸಂದರ್ಭದಲ್ಲಿ ಇಂದ್ರನಿಗೂ ಅರ್ಜುನನಿಗೂ ಯುದ್ಧವಾಯಿತಷ್ಟೆ, ಆಗ ಇಂದ್ರನ ವಜ್ರಾಯುಧದ ಏಟು ಬಿದ್ದ ಗುರುತನ್ನು ಇಂದ್ರನನ್ನು ಸೋಲಿಸಿದ ತನ್ನ ಯಶಸ್ಸಿನ ಕಾಂತಿಯಿಂದ ಮರೆಮಾಡಿದನೋ ಎಂಬ ಹಾಗೆ ಹೊಳೆಯುವ ರತ್ನದ ಕವಚವನ್ನು ತೊಟ್ಟು, ಅರ್ಜುನನು ಆಕಾಶದಲ್ಲಿ ಪ್ರಕಾಶಿಸುವ ನಕ್ಷತ್ರದಂತೆ ಕಂಡುಬಂದನು.

೫೯. ಹೀಗೆ ಸನ್ನದ್ಧನಾಗಿ ಅರ್ಜುನನು, ವ್ಯಾಸನ ಆಜ್ಞಾನುವರ್ತಿಯಾದ ಯಕ್ಷನು ತೋರಿಸಿದ ಬೆಟ್ಟದ ದಾರಿಯಲ್ಲಿ ಸುಖವಾಗಿ ಪ್ರಯಾಣಮಾಡಿದನು. ಅರ್ಜುನನ ಅಗಲಿಕೆಯಿಂದ ಪಾಂಡವರಿಗೂ ದ್ರೌಪದಿಗೂ ವ್ಯಥೆಯಾದದ್ದು ಮಾತ್ರವಲ್ಲ; ದ್ವೈತವನದಲ್ಲಿ ತಪಸ್ಸುಮಾಡುತ್ತಿದ್ದ ಮುನಿಗಳ ಹೃದಯಗಳು ಕೂಡ ಕಲಕಿ, ಅವರ ಕಣ್ಣುಗಳಲ್ಲೂ ನೀರು ತುಂಬಿಕೊಂಡಿತು.

೬೦. ಅರ್ಜುನನು ಪ್ರಯಾಣಮಾಡಿದಾಗ ದೇವದುಂದುಭಿಗಳು ಎಲ್ಲ ದಿಕ್ಕುಗಳಲ್ಲಿಯೂ ಮೊಳಗಿದುವು. ದೇವತೆಗಳು ಸುರಿಸಿದ ಹೂವಿನ ಮಳೆಯಿಂದ ಆಕಾಶವೆಲ್ಲ ಕಾಂತಿಯುಕ್ತವಾಯಿತು. 'ಪ್ರಿಯೆಯಾದ ಭೂಮಿಯೆ, ನಿನ್ನ ಭಾರವು ನಾಶವಾಗುವ ಸಮಯ ಸಮೀಪವಾಗಿದೆ. ಅರ್ಜುನನು ದಿವ್ಯಾಸ್ತ್ರಗಳನ್ನು ಪಡೆದುಬಂದು ಕೌರವರನ್ನು ಕೊನೆಗಾಣಿಸುತ್ತಾನೆ' ಎಂಬ ಪ್ರಿಯ ವಾರ್ತೆಯನ್ನು ಸಂತೋಷದಿಂದ ಹೇಳುವ ಹಾಗೆ, ಸಮುದ್ರನು ದಡಗಳನ್ನು ಅಪ್ಪಳಿಸುವ ತನ್ನ ಚಂಚಲವಾದ ಅಲೆಗಳೆಂಬ ತೋಳುಗಳಿಂದ ತನ್ನ ಪ್ರಿಯೆಯಾದ ಭೂಮಿಯನ್ನು ಬಿಗಿಯಾಗಿ ಅಪ್ಪಿಕೊಂಡನು.

## ಗಮನಿಸಬೇಕಾದ್ದು

ವ್ಯಾಸನ ಸೌಮ್ಯ ತೇಜಸ್ಸು, ಧರ್ಮರಾಜನ ಗುರುಭಕ್ತಿ, ವಿನಯ (೧-೧೦)

ಶ್ರೀವ್ಯಾಸವಾಣಿ: ವ್ಯಾಸನ ಪಾಂಡವ ಪಕ್ಷಪಾತಕ್ಕೆ ಕಾರಣ (೧೧-೧೬); ಕೌರವ ಪಕ್ಷದ ಬಲವರ್ಣನೆ (೧೭-೨೧); ಅರ್ಜುನನ ಕರ್ತವ್ಯ (೨೨-೨೩).

ಅರ್ಜುನನ ಶಿಷ್ಯತ್ವ, ವ್ಯಾಸನ ಅನುಗ್ರಹ, ಹಿತವಾದ, ವ್ಯಾಸನ ನಿಷ್ಕ್ರಮಣ, ಯಕ್ಷನ ಆಗಮನ (೨೪-೩೧).

ಅರ್ಜುನನ ಅಗಲಿಕೆಗೆ ಪಾಂಡವರ ವ್ಯಥೆ (೩೨-೩೪), ದ್ರೌಪದಿಯ ದುಃಖ (೩೫-೩೬), ಅರ್ಜುನಪ್ರೇಮ, ಕೌರವದ್ವೇಷ (೩೭-೩೮).

ದ್ರೌಪದಿಯ ಸಂದೇಶ: ತಮ್ಮ ಉದ್ಧಾರಕ್ಕೆ ಅರ್ಜುನನ ತಪಸ್ಸಿದ್ಧಿ ಅತ್ಯಗತ್ಯ (೩೯-೪೦); ಕೌರವರಿಂದ ತಮಗೆ ತುಂಬ ಅನ್ಯಾಯ, ಅವಮಾನ ಆಗಿದೆ (೪೧-೪೪); ಅರ್ಜುನನಿಗೆ ಅತಿಶಯವಾದ ತೇಜೋವಧೆಯಾಗಿದೆ (೪೫-೪೭); ಅರ್ಜುನನು 'ಕ್ಷತ್ರಿಯ' ಶಬ್ದಕ್ಕೆ ಅರ್ಹನಾಗಬೇಕು (೪೮-೫೧); ಆತನ ತಪಸ್ಸು ನಿರ್ವಿಘ್ನವಾಗಿ ನಡೆದು, ಕ್ಷೇಮವಾಗಿ ಹಿಂದಕ್ಕೆ ಬರಬೇಕು (೫೨-೫೪).

ಅರ್ಜುನನ ಉತ್ಸಾಹ, ಕ್ಷತ್ರಿಯೋಚಿತವಾದ ಶಸ್ತ್ರಾಸ್ತ್ರಸನ್ನಾಹ (೫೫-೫೮), ಯಕ್ಷನೊಡನೆ ಇಂದ್ರಕೀಲಕ್ಕೆ ಪ್ರಯಾಣ; (೫೯) ದೇವತೆಗಳ ಸಂತೋಷ (೬೦).

ಹಿಂದಿನ ಎರಡು ಸರ್ಗಗಳಲ್ಲಿ ಕಂಡ ಧರ್ಮರಾಜನೊಂದಿಗೆ ಈ ಸರ್ಗದವನನ್ನೂ ಹೊಂದಿಸಿಕೊಳ್ಳಿ. ಮೊದಲನೆಯ ಸರ್ಗದಲ್ಲಿ ಚಿತ್ರಿತನಾದ ದುರ್ಯೋಧನನನ್ನು ಈ ಸರ್ಗದಲ್ಲಿ ಕವಿ ಹೇಗೆ ಚಿತ್ರಿಸಿದ್ದಾನೆ ಗಮನಿಸಿ. ಮೊದಲನೆಯ ಸರ್ಗದ ದ್ರೌಪದಿಯ ಮಾತುಗಳನ್ನೂ ಈ ಸರ್ಗದಲ್ಲಿ ಆಕೆಯಾಡುವುದನ್ನೂ ಹೋಲಿಸಿ ನೋಡಿ. ಎರಡನೆಯ ಸರ್ಗದಲ್ಲಿ ಅಷ್ಟೆಲ್ಲ ಆರ್ಭಟಿಸಿದ ಭೀಮ ಈ ಸರ್ಗದಲ್ಲಿ ಮೂಕನಾಗಿರುವುದಕ್ಕೆ ಕಾರಣವೇನಿರಬಹುದೋ ವಿಚಾರಮಾಡಿ. ಆ ಸರ್ಗದಲ್ಲಿ ಕಂಡ ಭೀಮನಿಗೆ ಬದಲಾಗಿ ಈ ಸರ್ಗದಲ್ಲಿ ಬಂದಿರುವ ಅರ್ಜುನನ ಪಾತ್ರದ ರಮ್ಯತೆಯನ್ನು ಭಾವಿಸಿಕೊಳ್ಳಿ. ಎರಡನೆಯ ಸರ್ಗದ ಕೊನೆಯಲ್ಲೂ ಮೂರನೆಯ ಸರ್ಗದ ಮೊದಲಿನಲ್ಲೂ ಬಂದಿರುವ ವ್ಯಾಸನ ಪಾತ್ರಚಿತ್ರಣದ ಒಟ್ಟು ಸೊಗಸನ್ನು ಅನುಭವಿಸಿ.

# ಮೂರು ಸರ್ಗಗಳ ಒಟ್ಟು 'ಜ್ಞಾಪಕರೂಪ'

## ಮೊದಲನೆಯ ಸರ್ಗ

ಧರ್ಮರಾಜನ ಬಳಿಗೆ ದೂತನ ಆಗಮನ (೧-೩)

**ದೂತನು ಆಡಿದ ಶಾಸ್ತ್ರಾರ್ಥ (೪-೨೫)**

ಧರ್ಮರಾಜನ ಮಂತ್ರಾಲೋಚನೆ, ದ್ರೌಪದಿಯ ಕ್ರೋಧ (೨೬-೨೭).

**ದ್ರೌಪದಿಯು ಕೆರಳಿಸುವ ಮಾತು (೨೮-೪೬)**

## ಎರಡನೆಯ ಸರ್ಗ

ದ್ರೌಪದಿಯ ಮಾತಿಗೆ ಭೀಮನ ಅನುಮೋದನೆ (೧)

**ಭೀಮನ ವಾದ (೨-೨೪)**

ಧರ್ಮರಾಜನ ಶಾಂತಸ್ವಭಾವ (೨೫)

**ಭೀಮನಿಗೆ ಧರ್ಮರಾಜನ ಪ್ರತಿವಾದ (೨೬-೫೩)**

ವ್ಯಾಸರ ಆಗಮನ, ಧರ್ಮರಾಜನ ಸ್ವಾಗತಸತ್ಕಾರ (೫೪-೫೯)

## ಮೂರನೆಯ ಸರ್ಗ

ಧರ್ಮರಾಜನ ಗುರುಭಕ್ತಿ, ಗೌರವ (೧-೧೦)

**ವ್ಯಾಸರ ಮಹಾವಾಕ್ಯಗಳು (೧೧-೨೩)**

ಅರ್ಜುನನಿಗೆ ಉಪದೇಶ, ಮಂತ್ರದಾನ, ಅನುಗ್ರಹ (೨೪-೩೧)

ಪಾಂಡವರ ಮಿತವಾದ ವ್ಯಥೆ (೩೨-೩೪), ದ್ರೌಪದಿಯ ದುಸ್ಸಹವಾದ ವ್ಯಥೆ (೩೫-೩೮)

**ದ್ರೌಪದಿಯ ಮಹಾವಾಕ್ಯಗಳು (೩೯-೫೪)**

ಅರ್ಜುನನ ಉತ್ಸಾಹ, ಸನ್ನಾಹ, ಪ್ರಯಾಣ (೫೫-೬೦)

## ಗಮನಿಸಬೇಕಾದ್ದು

'ಕಿರಾತಾರ್ಜುನೀಯ'ದ ಮೊದಲನೆಯ ಮೂರು ಸರ್ಗಗಳಲ್ಲಿ ನಡೆಯುವ ಕಥೆ ಕೊಂಚ. ದುರ್ಯೋಧನನ ವೃತ್ತಾಂತವನ್ನು ದೂತನಿಂದ ತಿಳಿದು, ಧರ್ಮ

ರಾಜನು ಅದನ್ನು ತನ್ನವರಿಗೆ ಹೇಳಿದಾಗ, ಕೂಡಲೆ ಯುದ್ಧ ಮಾಡಬೇಕೆಂದು ದ್ರೌಪದಿ ವಾದಿಸುವಳು. ಭೀಮನು ಅವಳ ವಾದಕ್ಕೆ ಪುಷ್ಟಿಕೊಟ್ಟು ಮಾತಾಡುವನು. ಭೀಮನ ವಾದಕ್ಕೆ ಸರಿಯಾದ ಉತ್ತರ ಕೊಟ್ಟು, ಧರ್ಮರಾಜನು ಅವನನ್ನು ಸಮಾಧಾನಪಡಿಸುವ ವೇಳೆಗೆ, ವ್ಯಾಸನು ಬರುವನು. ಕೌರವರನ್ನು ಸೋಲಿಸಬೇಕಾದರೆ ಅರ್ಜುನನು ದೇವತಾಸ್ತ್ರಗಳನ್ನು ಸಂಪಾದಿಸಬೇಕೆಂದು ಬೋಧಿಸಿ, ಅವುಗಳನ್ನು ಸಾಧಿಸುವ ಮಾರ್ಗವನ್ನು ಉಪದೇಶಿಸುವನು. ಅರ್ಜುನನು ಹೊರಡುವ ಕಾಲದಲ್ಲಿ ದ್ರೌಪದಿಯು ಅವನಿಗೆ ಕೆಲವು ಸಂಗತಿಗಳನ್ನು ಜ್ಞಾಪಿಸಿಕೊಡುವಳು. ಅನಂತರ ಅರ್ಜುನನು ಇಂದ್ರಕೀಲಕ್ಕೆ ಹೊರಡುವನು. ಭೂಭಾರವಿಳಿಯುವುದೆಂದು ದೇವತೆಗಳಿಗೆ ಸಂತೋಷವಾಗುವುದು.

ಹೀಗೆ, ಇಲ್ಲಿ ಕಥೆ ಕೊಂಚವೇ ಆದರೂ, ಕಥೆಗಳಲ್ಲಿ ಬರುವ ಪಾತ್ರಗಳ ಮಾತಿಗೂ, ಆ ಮಾತಿನ ಮೂಲಕ ಪ್ರಕಟವಾಗುವ ಮನೋಧರ್ಮಗಳಿಗೂ ಇಲ್ಲಿ ಹೆಚ್ಚು ಪ್ರಾಮುಖ್ಯ. ಉದಾಹರಣೆಗೆ ದೂತ, ದ್ರೌಪದಿ (ಎರಡು ಸಲ), ಭೀಮ, ಧರ್ಮರಾಜ, ವ್ಯಾಸ ಇವರು ಆಡುವ ಮಾತುಗಳೇ ಇಲ್ಲಿ ಪ್ರಧಾನವಾದದ್ದು; ಮೊದಲು ಗಮನಿಸಬೇಕಾದ್ದು.

ಇದರ ಜೊತೆಗೆ, ದೂತ—ದ್ರೌಪದಿ—ಭೀಮ—ಧರ್ಮರಾಜ—ವ್ಯಾಸ ಇವರ ಮಾತುಗಳ ಮೂಲಕ ಪರೋಕ್ಷವಾಗಿ ನಮಗೆ ತಿಳಿದು ಬರುವ ದುರ್ಯೋಧನ ಪಾತ್ರದ ಗುಣಾವಗುಣಗಳು ಕೂಡ ಇಲ್ಲಿ ಗಮನಿಸಿಕೊಳ್ಳಬೇಕಾದ್ದೇ.

ಮತ್ತೂ ಗಮನಿಸಿಕೊಳ್ಳಬೇಕಾದ್ದೆಂದರೆ—ದ್ರೌಪದಿಗೂ ಭೀಮನಿಗೂ ಕಂಡು ಬರುವ ಸಮಾನ ಮನೋಧರ್ಮ; ಧರ್ಮರಾಜನಿಗೂ ವ್ಯಾಸನಿಗೂ ಇರುವ ಅನ್ಯೋನ್ಯವಾದ ಧರ್ಮದೃಷ್ಟಿ; ಭೀಮನಿಗೂ ಅರ್ಜುನನಿಗೂ ಗುಣದಲ್ಲಿ ಕಂಡು ಬರುವ ವ್ಯತ್ಯಾಸ.

ಕಡೆಯದಾಗಿ ಗಮನಿಸಿಕೊಳ್ಳಬೇಕಾದ್ದು—ಮೂರು ಸರ್ಗಗಳಲ್ಲಿಯೂ ವ್ಯಾಪಿಸಿಕೊಂಡು ವಿಶದವಾಗಿರುವ ಧರ್ಮರಾಜನ ಅತಿ ಮನೋಜ್ಞವಾದ ಪಾತ್ರಚಿತ್ರಣ.

---

ಬೆಂಗಳೂರು ಅರಳೇಪೇಟೆಯಲ್ಲಿರುವ ಬಿ. ಬಿ. ಡಿ. ಪವರ್ ಪ್ರೆಸ್ಸಿನಲ್ಲಿ
ಯು. ನರಸಿಂಹ ಮಲ್ಯ ಅವರಿಂದ ಮುದ್ರಿಸಲ್ಪಟ್ಟಿತು.

# ಸೆಂಟ್ರಲ್ ಕಾಲೆಜ್ ಕರ್ಣಾಟಕ ಸಂಘದ

## ಪ್ರಕಟನೆಗಳ ಒಟ್ಟುಪಟ್ಟಿ

## (೧೯೫೨—೧೯೫೮)

(* ಈ ಗುರುತಿನವು ನಮ್ಮ ಕಾಲೇಜಿನ ವಿದ್ಯಾರ್ಥಿಗಳ ಉತ್ತಮ ಬರಹಗಳನ್ನು ಒಳಗೊಂಡ 'ಕಾಲೆಜ್ ಬರವಣಿಗೆ'ಗಳು.)

| | | ರೂ. |
|---|---|---|
| ಫೆಬ್ರುವರಿ, 52. | ಶ್ರೀ ಕೈಲಾಸಂ ಅವರ ಸ್ಮರಣೆ .... | ೨.೨೫ |
| ಜೂನ್, 52. | ಕರ್ಣಾಟಕ ಮಾಲವಿಕಾಗ್ನಿಮಿತ್ರ ನಾಟಕಂ | ೧.೭೫ |
| ಆಗಸ್ಟ್, 52. | ಮೊನ್ನ ವನ್ನ .... .... | ೨.೦೦ |
| ಸೆಪ್ಟೆಂಬರ್, 52. | ನಾಗನ ಪದಗಳು .... .... | ೧.೨೫ |
| ಜನವರಿ, 53. | ಬಾಲಸರಸ್ವತಿ * .... .... | ೨.೫೦ |
| ಜನವರಿ, 53. | ನಮ್ಮ ನಮ್ಮವರು * .... .... | ೨.೫೦ |
| ಜನವರಿ, 53. | ಚಿನ್ನದ ದೋಸೆ * .... .... | ೦.೭೫ |
| ಆಗಸ್ಟ್, 53. | ಶಕ್ತಿ .... .... .... | ೩.೦೦ |
| ಡಿಸೆಂಬರ್, 53. | ಬಾಹುಬಲಿ ವಿಜಯಂ .... .... | ೧.೫೦ |
| ಡಿಸೆಂಬರ್, 53. | ಮಕ್ಕಳ ಮಾತು * .... .... | ೧.೦೦ |
| ಫೆಬ್ರುವರಿ, 54. | ಪಚ್ಚೆಯ ತೆನೆ * .... .... | ೧.೦೦ |
| ಮಾರ್ಚ್, 54. | ಗಂಧದ ಹುಡಿ * .... .... | ೧.೦೦ |
| ಆಗಸ್ಟ್, 54. | ದುರಾಸೆಯ ದಂಡ * .... .... | ೧.೨೫ |
| ಅಕ್ಟೋಬರ್, 54. | ಸುಪ್ರಭಾತವ್ .... .... | ೧.೦೦ |
| ಡಿಸೆಂಬರ್, 54. | ಕಾರ್ಕಳದ ಗೊಮ್ಮಟಸ್ವಾಮಿ .... | ೧.೦೦ |
| ಡಿಸೆಂಬರ್, 54. | ಸೋಕ್ರಟೀಸನ ಮರಣ .... .... | ೧.೨೫ |
| ಜನವರಿ, 55. | ಜನಪ್ರಿಯ ವಿಜ್ಞಾನ * .... .... | ೧.೫೦ |
| ಸೆಪ್ಟೆಂಬರ್, 55. | ಲಿಯೊನಾರ್ಡೊ .... .... | ೧.೫೦ |
| ಅಕ್ಟೋಬರ್, 55. | ಒಂದು ಶಾಂತಿಮಂತ್ರ .... .... | ೦.೧೯ |

| | | ರೂ. |
|---|---|---|
| ಜನವರಿ, 56. | ಪದ್ಯಾಂಜಲಿ * .... .... | ೦.೭೫ |
| ಜನವರಿ, 56. | ಅರೆಮೂಕ * .... .... | ೦.೭೫ |
| ಜೂನ್, 56. | ಧರ್ಮಪದ ಪ್ರವೇಶಿಕಾ .... .... | ೧.೦೦ |
| ಜೂನ್, 56. | ಸಂಸ ಕವಿ .... .... .... | ೩.೭೫ |
| ಜನವರಿ, 57. | ನಮ್ಮ ಬೇಂದ್ರೆಯವರು * .... | ೧.೨೫ |
| ಫೆಬ್ರುವರಿ, 57. | ಹೂವಿನ ಪೂಜೆ * .... .... | ೧.೨೫ |
| ಜೂಲೈ, 57. | ನಾಲ್ಕಂಕದ ನಾನ್‌ಸೆನ್ಸ್ .... .... | ೦.೬೨ |
| ಡಿಸೆಂಬರ್, 57. | ಚಿತ್ರದುರ್ಗದ ಬೆಟ್ಟ * .... .... | ೦.೮೭ |
| ಮಾರ್ಚ್, 58. | ಶ್ರೀ ರಾಮಚಂದ್ರ ಪ್ರಭು .... .... | ೧.೫೦ |
| ಮಾರ್ಚ್, 58. | ಕ್ಷಮಾಮೂರ್ತಿ ಧರ್ಮರಾಜ .... | ೦.೭೫ |
| ಏಪ್ರಿಲ್, 58. | ಹತ್ತು ದಿಕ್ಕಿನ ಬೆಳಕು .... .... | ೧.೦೦ |
| ಏಪ್ರಿಲ್, 58. | ಇಬ್ಬರು ದಳವಾಯಿಗಳು .... .... | ೦.೬೨ |



## [ನಮ್ಮಲ್ಲಿ ದೊರಕುವ ಇತರ ಪುಸ್ತಕಗಳು]

| | | |
|---|---|---|
| ೧. | ಸ್ವತಂತ್ರ ಭಾರತದ ಅಶೋಕಚಕ್ರಧ್ವಜ .... | ೧.೫೦ |
| ೨. | ನಮ್ಮ ಬಾವುಟ .... .... | ೦.೩೭ |
| ೩. | ಕೀಚಕ (ಕೈಲಾಸಂ ಕಲ್ಪನೆ) .... .... | ೧.೫೦ |
| ೪. | ಕಾಶ್ಮೀರದ ಹಳ್ಳಿಯ ಕತೆಗಳು .... .... | ೧.೦೦ |

ಕರ್ಣಾಟಕ ಸಂಘ, ಸೆಂಟ್ರಲ್ ಕಾಲೇಜ್, ಬೆಂಗಳೂರು

## ನಮ್ಮ ಹೊಸ ಪುಸ್ತಕಗಳು

ರೂ.

೧. ಡಾಕ್ಟರ್ ಪಿ. ಕೃಷ್ಣರಾವ್ ಅವರ
**ಚಿತ್ರದುರ್ಗದ ಬೆಟ್ಟ ಮತ್ತು ನಾಯಕ ಸಾಮ್ರಾಜ್ಯ** ೦.೪೭

೨. ಶ್ರೀಮಾನ್ ಡಿ. ವಿ. ಜಿ. ಅವರು ಚಿತ್ರಿಸಿರುವ
**ಶ್ರೀ ರಾಮಚಂದ್ರ ಪ್ರಭು** .... .... ೧.೫೦

೩. ಭಾರವಿ ಚಿತ್ರಿಸಿರುವ
**ಕ್ಷಮಾಮೂರ್ತಿ ಧರ್ಮರಾಜ** .... .... ೦.೬

೪. ಶ್ರೀ ಜಿ. ಪಿ. ರಾಜರತ್ನಂ ಅವರ
**ಹತ್ತು ದಿಕ್ಕಿನ ಬೆಳಕು** .... .... ೧.೦೦

೫. ಸಂಸಕವಿ ಚಿತ್ರಿಸಿರುವ
**ಇಬ್ಬರು ದಳವಾಯಿಗಳು** .... .... ೦.೬೧

(ನಮ್ಮ ಎಲ್ಲಾ ಪುಸ್ತಕಗಳ ಒಟ್ಟುಪಟ್ಟಿ ಇದೇ ಹೊದಿಕೆಯೊಳಗೆ.)

## ನಮ್ಮ ಪುಸ್ತಕಗಳ ಮಾರಾಟಗಾರರು

೧. ಸತ್ಯಶೋಧನ ಪುಸ್ತಕ ಭಂಡಾರ, ಕೋಟೆ, ಬೆಂಗಳೂರು.
೨. ಸ್ಟ್ಯಾಂಡರ್ಡ್ ಬುಕ್ ಡಿಪೊ, ಅವೆನ್ಯೂ ರೋಡ್, ಬೆಂಗಳೂರು
೩. ಶಾರದಾ ಪ್ರಕಟನಾಲಯ, ಅರಳೇಪೇಟೆ, ಬೆಂಗಳೂರು.
೪. ಎಚ್. ಎನ್. ರಾವ್ ಬ್ರದರ್ಸ್, ಚಿಕ್ಕಪೇಟೆ, ಬೆಂಗಳೂರು.
೫. ಕಾವ್ಯಾಲಯ, ಕೃಷ್ಣಮೂರ್ತಿಪುರಂ, ಮೈಸೂರು.
೬. ಉಷಾ ಪ್ರೆಸ್, ಹಳೇ ಪೋಸ್ಟಾಫೀಸ್ ರಸ್ತೆ, ಮೈಸೂರು.
೭. ಸಾಹಿತ್ಯ ಭಂಡಾರ, ಹುಬ್ಬಳ್ಳಿ.

**ಕರ್ಣಾಟಕ ಸಂಘ,**
**ಸೆಂಟ್ರಲ್ ಕಾಲೇಜ್, ಬೆಂಗಳೂರು.**

